# ದೂರದ ಬೆಟ್ಟದ ಹಾದಿಯಲ್ಲಿ



ಕೆ.ವಿ.ಸುಬ್ಬಣ್ಣ

# ಹೂವು ಚೆಲ್ಲಿದ ಹಾದಿಯಲ್ಲಿ

[ಉದಯಯೌವನದ ಸ್ಮೃತಿಸಂಚಯ]

ಕೆ. ವಿ. ಸುಬ್ಬಣ್ಣ

ಅಕ್ಷರ ಪ್ರಕಾಶನ

ಸಾಗರ — ಶಿವಮೊಗ್ಗ

ಮುಖಚಿತ್ರ :

ಶ್ರೀ. ಆರ್. ಸೀತಾಪತಿ ನಾಯಿಡು.

ಎಲ್ಲ ಹಕ್ಕುಗಳನ್ನೂ ಕಾದಿರಿಸಿದೆ. ಪ್ರಥಮ ಮುದ್ರಣ: ೧೯೫೭ ನೆಯ ಜನವರಿ ತಿಂಗಳಿನಲ್ಲಿ, ಅಕ್ಷರ ಪ್ರಕಾಶನ (ಸಾಗರ-ಶಿವಮೊಗ್ಗ) ಅವರಿಗಾಗಿ, ಶ್ರೀ. ನ. ಕೃಷ್ಣ, ಚೇತನ ಮುದ್ರಾಲಯ, ಮೈಸೂರು-ಅವರಿಂದ ಮುದ್ರಿತವಾಯಿತು. ಮುಖಪುಟದ ಮುದ್ರಕರು: ಮೈಸೂರು ಪ್ರಿಂಟಿಗ್ ಅಂಡ್ ಪಬ್ಲಿಶಿಂಗ್ ಹೌಸ್, ಮೈಸೂರು.

**ಬೆಲೆ: ಒಂದೂವರೆ ರೂಪಾಯಿ.**

# ಅರಿಕೆ

ಸುಸಂಸ್ಕೃತ ಮನೆತನವೊಂದರಲ್ಲಿ ಹುಟ್ಟಿ ಆಧುನಿಕ ವಿದ್ಯಾಭ್ಯಾಸ ವನ್ನು ಪಡೆದ ಸೂಕ್ಷ್ಮಚೇತಸನೂ ಭಾವಜೀವಿಯೂ ಮಾತುಗಾರನೂ ಆದ ತರುಣನೊಬ್ಬನ ಪ್ರಣಯಕಥೆಯೊಂದನ್ನು ಕೇಳಿದೆ. ತಾರುಣ್ಯೋದಯದ ವೇಳೆಯಲ್ಲಿ ಸಹಜವಾಗಿ ನಡೆಯಬಹುದಾದ ಅತಿಭಾವುಕತೆಯ ಈ ಕಥೆ, ಅವನ ಊರ ಬದಿಯ ಸುಂದರವಾದ 'ಹೂವು ಚೆಲ್ಲಿದ ಹಾದಿಯಲ್ಲಿ' ನಡೆ ಯಿತಂತೆ. ಆತನ ಭಾವವನ್ನೆ ಅನುಸರಿಸಿ–ಆತ್ಮವೃತ್ತವೆನ್ನುವಂತೆ–ಮುಂದಿನ ಇಪ್ಪತ್ತೆರಡು ಕಾವ್ಯಖಂಡಗಳಲ್ಲಿ, ಆ ರಮ್ಯಕಥೆಯ ಕೆಲವು ಮಿಂಚುಗಳನ್ನು ಹಿಡಿದಿಡಲೆತ್ನಿಸಿದ್ದೇನೆ. ಕೊನೆಯ ಎರಡು ಕವನಗಳಲ್ಲಿ ವಿಶ್ವದ 'ಆಕರ್ಷಣ ಶಕ್ತಿ'ಯನ್ನು ನೆನೆದಾಗ ಬಂದ ಉದ್ಗಾರಗಳಿವೆ. ಇದು ಸ್ಥಳವೆಂದು ಅವುಗಳನ್ನೂ ಕೂಡಿಸಿದ್ದೇನೆ.

ಸುಮಾರು ಎಂಟು ವರ್ಷಗಳ ಅವಧಿಯಲ್ಲಿ ಈ ಕವನಗಳು ರಚಿತ ವಾದವು. ಆ ಕಾರಣ ಕವನಗಳ ಕವಚ, ಒಂದರಿಂದೊಂದಕ್ಕೆ, ಬದಲಾ ಗಿದೆ. ಹಿಂದಿರುವ ಕಥಾಸೂತ್ರ ಇವೆಲ್ಲವನ್ನೂ ಒಂದುಗೂಡಿಸೀತೆಂದು ನಂಬಿದ್ದೇನೆ.

ಹಲವು ಪತ್ರಿಕೆಗಳಲ್ಲಿ, ಹಿರಿಯರ ಮಿತ್ರರ ಮಡಿಲಿನಲ್ಲಿ ಆಗಾಗ ಇವು ಗಳಿಗೆ ಆಶ್ರಯ ದೊರೆತಿದೆ. ಆ ಪ್ರೋತ್ಸಾಹದಿಂದ ನನಗೆ ತುಂಬ ಹರ್ಷ ವಾಗಿದೆ ಎಂಬುದನ್ನು ಸೂಚಿಸಿ ಅವರಿಗೆ ಕೃತಜ್ಞತೆ ವ್ಯಕ್ತಪಡಿಸುತ್ತೇನೆ.

ಜೀವನದಲ್ಲಿ ಅಪರೂಪವಾದ ಸದ್ಯಃಪರವಿಶ್ರಾಂತಿಯನ್ನು ಪಡೆಯುವ ಸಲುವಾಗಿ ಬಂದಿರುವ ರಸಾಭಿಸಾರಿಗಳ ಹಂಬಲ ಇಲ್ಲಿ ಎಷ್ಟು ತಣಿದೀತೋ ಎಂಬ ಸಂಶಯ ನನಗೇ ಉಂಟು. ಅಲ್ಪ ತಣಿವಾದರೂ ದೊರೆತರೆ ನಾನು ಧನ್ಯ.

**ಕೆ. ವಿ. ಸುಬ್ಬಣ್ಣ.**

## ಪರಿವಿಡಿ

# ಹೂವು ಚೆಲ್ಲಿದ ಹಾದಿಯಲ್ಲಿ

[ ಉದಯಯೌವನದ ಸ್ಮೃತಿಸಂಚಯ ]

" ಹೂಗನಸಿನ ಬಿಸುಸುಯ್ಲಿನ
ಚಿತ್ರಮಾಲೆ ಮೂಡುತಿರಲು
ನಿಲುವೆ ಪ್ರೇಕ್ಷಕನೊಲು.... "

ಕೆ. ವಿ. ಸುಬ್ಬಣ್ಣ.

## ೧. ಹೂವು ಚೆಲ್ಲಿದ ಹಾದಿಯಲ್ಲಿ....

ಆಹ! ನಂದನವನಮಾರ್ಗ ಹಾದಿ,
ಆಚ್ಛೋದದ ಸರಸು ಕೆರೆ,
ದಿವ್ಯವೆಲ್ಲ ಸಂಜೆಗೆ!
ಹೆರೆ ಹೊರೆಹೊರೆ ಹೂ ಸುರಿದಿರೆ
ತೆರೆತೆರೆ ನೊರೆಯಾಡುವ ಕೆರೆ
ಆಯ್ದು ಮಾಲೆಗಟ್ಟಿದೆ
ನಾಗವಲ್ಲಿಯುಟ್ಟ ಕೌಂಗು
ತೆಂಗುಬಾಳೆಯತ್ತಣಿಂದೆ
ಬಿಂಬ ನೋಡುತೊಲೆದಿವೆ
ಚಿತ್‌ತರಂಗರಂಗದಲ್ಲಿ
ಸವಿಗನಸುಗಳುರುಳುವವೊಲು
ಬೆಳ್ಳಕ್ಕಿಯ ಸಾಲ್‌ಗಳು,
ಕನವರಿಸಿವೆ, ಮೆರೆಸುತಿರಲು
ನೀರ್ವನಿಗಳ ಹರಳಸರಳ
ಕೋಳೆ ಹೂವದಳದಳ
ತಡಿಯ ಕೇದಗೆಯ ಬನದ
ಏಲಕ್ಕಿಯ ಸಿಂಗಾರದ
ಅಂಗರಾಗ ಸೂಸುವ,
ಪರಿಮಳ ಓಹ್ ಪಸರಿಸುತಿದೆ,
ಚೆಲುವು—ಮೀರಿ ಮೆಯ್ಯ ನೆಲವ—
ಅಲೆವೊಲು ಆಕಾಶವ
ತೊನೆದ ಲಾಸ್ಯಭಂಗಿಯಲ್ಲಿ
ಹೂವಮುಡಿದ ಕೆರೆಯ ಹೆರಳು
ತೂಗಿದೆ—ಅದೆ ಹಾದಿಯು!

ಕನೆಗಟ್ಟಿದ ಮೃದುಪರಿಮಳ
ತೆಳುಮಂಜಿನ ಅರೆದೆರೆಯೆನೆ
ಕೈನಿಲುಕೊಳು ತೇಲಿದೆ
ಪರಿಮಳಮದಮತ್ತ ಸರ್ಪ!
—ಪುಷ್ಪಪರ್ಯಂಕಪಥವಿ—
ದಂತೆಸೆದಿದೆ ಎದುರಲಿ
ಹತ್ತಂಕಣ ಹರಡಿದಾಲ—
ವಿದರ ಹಸಿರಿನೆಲೆವನೆಗಳೆ
ನೆಲೆ ಖಗಸಂಸಾರಕೆ
ಬೀಳಲುಗಳು ನೇಲಾಡಿರೆ
ದುಂಡಿಗಲ್‌ಗಳದರಕೆಳಗೆ
ಬಾಯಿಬಿಟ್ಟು ಕುಳಿತಿವೆ
ತೇರುಬರಲು ದಾರಿಬಿಟ್ಟು
ಗಿಡಿದು ಸಾಲುಗಟ್ಟಿ ನಿಂತ
ವನದ ವಧೂಮಂಡಲ,
ಎನೆ ಮರಗಳು ತೂಗಿಬಾಗಿ
ಬರವ ನೋಡುತಿಣುಕುತಿಹವು
ಯಾವ ಚೆಲುವ ಬರುವನೋ!
ಗಾಳಿ ಸುಳಿಯಲೊಮ್ಮೆ ಅವನೆ
ಬಂದನೆಂದು 'ಶ್' ಎನುತಿವೆ
ಮೆಯ್‌ಮುಡಿ ಸರಿಗೊಳಿಸಿವೆ
ಸುತ್ತಲೂ ದಿಗಂತದಿಂದ
ಓಹೊ ವಿಸ್ಮಯವ ನೋಡೆ
ಬೆಟ್ಟ ನೆತ್ತಿಯೆತ್ತಿವೆ
ಹಾಡುತಿಹವೆ ಸೋಬಾನ
ಹಕ್ಕಿ?—ಇಲ್ಲ,—ಇದು ಮರದುಲಿ
ಒಲವಿನ ಮೆಲುದನಿಯಲಿ

ಬಗನೆಗೊನೆಯ ಹಸಿರುಮಣಿಯ
ಝುಲ್ಲರಿಗಳು ತೂಗಾಡಿವೆ
ತುಂಬಿಗಳೋ ನೊರೆದಿವೆ
ಹಸಿರ ಬಸಿರೊಳೊಗೆದಲರಿನ
ತೂಗುಂಜೊಡರಾಡಿಸುತಿವೆ
ಇಲ್ಲಿ ಕೆಂಡಸಂಪಿಗೆ
ಬದಿಗೆ ನಾಗಸಂಪಿಗೆಯಿದೆ
ಮೆಲುಪಕಳೆಯ ಬೆಣ್ಣೆ ಹೂವು
ನಡುವೆ ಹೊನ್ನ ಚವುರಿಯು
ಚಿಕ್ಕೆ ಗಿಡಿದ ರಂಜಲೆಡೆಗೆ
ಏನು ಚೆಂದ ಕಕ್ಕೆಯಿದರ
ಪೀತಪುಷ್ಪಕಂಚುಕ
ಸೌಂದರ್ಯದ ಬಂದಳಿಕೆಯು–
ದೆನೆ ರಸಿಕನ ಮನ ಹೆಣೆದೊಲು
ಹೊಸರ ನಲ್‌ಗನಸನು,
ವೃಕ್ಷರಸಾಲವೊ ಮೆರೆದಿದೆ
ಸೀತಾಳಿಯನರೆ ಅರಳಿಸಿ
ಹೂದಂಡೆಯ ನೇಲಿಸಿ
ಗೌರಿಹೂ ಬಳ್ಳಿಯಲ್ಲಿ
ತೊಂಡಿಲೊಲೆವುದಾರಿಗೆಂದೊ
ಚೆಲುವಿ ಮುಡಿವಳಾವಳೋ!
....ಓಹ್! ಒಂದೆ? ಎರಡೆ?–ಎಣಿಕೆಗಿಹುದೆ?
ಬಣ್ಣಿಸುವೆಂಟೆದೆಯದುಂಟೆ?
ಹೂವೆಹೂವು–ಸಂತೆ!

* * *

ಇಲ್ಲಿ ಹೂವಸಂತೆಯಲ್ಲಿ
ಹರೆಯದ ಕಣ್‌ಚೂಪೆನುವೊಲು
ನಡೆದಿದೆ ಬಗೆಯಲೆಯಲು

ನೆನಪಿನುಯ್ಯಾಲೆಯಲ್ಲಿ
ಅಲ್ಲು ಇಲ್ಲು ಎಲ್ಲು ನಿಲದೆ
ಜೀವ ಜೀಕಲಾಡಿದೆ
ಹುಡುಗುತನದ ಬಿಸಿಲು ಮಳೆಯ
ಚಂಚಲ ಶ್ರಾವಣನ ಛಲಕೆ
ಚಿತ್ತ ಬೊಂಬೆಯಾಗಿದೆ!
....ಒಮ್ಮೆ ನೋಡೆ ಮನವೆನ್ನದು
ಹೂವು ಹಾಸಿನಿಂಥ ಹಾದಿ
—ನೂರು ಭಾವಸಮಾಧಿ!
ಪುಣ್ಯವಳಿದು ನೆಲಸೇರಿದ
ಅಪ್ಸರೆಯರ ಮೃತ್ಯುಶಯ್ಯೆ
—ಅದೇ ತೆರನ ವಿಫಲತೆ!
ರಂಜಲುಮರ ನಕ್ಷತ್ರದ
ಹೂವುಗಳನು ಸುರಿದ ತೆರದ
ಬಯಕೆಯಿಹವು ಚೆದುರಿದ
ಉದುರುತಿಹವು ಮನದಿ ಕೂಡ
ಇಲ್ಲಿನ ತೆರ ಎಸಳು ಎಸಳು
ನೆನಹು–ನೆಲಕೆ ಮೀಸಲು!

* * *

ಕುಣಿಕುಣಿಯುತ ಬಂದೆನೆಂದು
ಹಸುಳೆ, ಸಂತಸದ ಭರದಿ
ನಿನ್ನ ಮಡಿಲೊಳೊರಗಿದೆ
ಹರೆಯದ ಬಿಸಿನೆತ್ತರುಕ್ಕು
ಚಿಮ್ಮಿ ಎದೆಯ ಕೆರಳಿಸಿರಲು
ಮನದ ಹಕ್ಕಿ ಹಾರಲು
ಕನಸಿನ ಕೈಹಿಡಿಸಿ ನಡಸಿ–
ದೊಂದು ಪ್ರಣಯನೃತ್ಯಶಾಲೆ–
ಗಾವೆ ನೀನೆ ಹಿನ್ನೆಲೆ

ಹಸುಳೆಯನಂದಂತು ರಮಿಸಿ
ಹರೆಯುವ ನಲಿಸಿಂದೊ ನಶಿಸಿ
ನಿಂತೆ ಮನವ ಬಿಂಬಿಸಿ

* * *

ಹೂವುಗೋರಿಯಿಂದಲೆದ್ದ
ಪ್ರೇತಸ್ಮೃತಿಗಳಲೆಯುತಿರಲಿ
ಚೆಲುವಿನ ತನಿಬೆಳಕಲಿ

ನಿಶ್ಚಲ ಜಲಸರಸಸ್ಫಟಿಕ
ಒಮ್ಮೆ ಕಲಕಿ ಮೂಡದೇನು
ಸೊನ್ನೆ ಸೊನ್ನೆ ಸೊನ್ನೆಯು?

ಚೆಲುವಿನಡಿಯಲೆಲ್ಲ ಚೆಂದ
—ಕಲ್ಲು ಮಣ್ಣು ದಿಣ್ಣೆ ತಗ್ಗು
ಬೆಳುದಿಂಗಳೊಳಂದವು!

ಹೂಗನಸಿನ ಬಿಸುಸುಯ್ಲಿನ
ಚಿತ್ರಮಾಲೆ ಮೂಡುತಿರಲು
ನಿಲುವೆ ಪ್ರೇಕ್ಷಕನೊಲು!

---

## ೨. ನಿರಿನಿರಿ ಚಿಮ್ಮಿಸಿ ನಡೆದುಬರೆ

ನಿರಿನಿರಿ ಚಿಮ್ಮಿಸಿ ನಡೆದುಬರೆ
ನೀ—ನಿರಿನಿರಿ ಚಿಮ್ಮಿಸಿ ನಡೆದುಬರೆ
ಮೆಯ್ ನವಿರಲು ನೆಲ ನಡುಗಿತು, ಎಲರಲಿ
ಮೆಲಮೆಲನಲರಲೆದುದುರಿದವು
        ಒಲವಿನ ಹೂಮಳೆ ಸುರಿಯುವೊಲು....

ಪೂರ್ವದಿಗಂತವು ಎವೆತೆರೆದರಳಿರೆ
        ನೆಲ ಬೆಳಕಿನ ಹೊಂದೊಡಿಗೆಯಲಿ
ನಲಿದಿರೆ, ಹಾರುವ ಕೂರುವ ಹಕ್ಕಿಯು
        ಟಿಂವ್‌ಟಿಂವ್‌ಗುಡುತಿರೆ ಟೊಂಗೆಯಲಿ
ಮಂಪರುಜಂಪಿನ ಮಗು ಕಣ್ದೆರೆದೊಲು
        ಕಿನ್ನರಲೋಕದ ನಂದನದಿ
ಬೆರಗಿನಲಿರೆ–ಆಹ್ ! ಫಕ್ಕನೆ ಕಂಡೆನು
        ಹಾಲ್‌ನಗುವಿನ ಹೆಣ್ ತೇಲುವುದ....

ಮಂಜಿನಪೊರೆ ಕಳೆದಿರೆ ಹೊಸ ಹರೆಯದಿ
        ನುಸುಳುವ ಗಾಳಿಯು ಕಚಕುಳಿಗೆ
ನವಿರೋ ನಿಮಿರಲು ಮೆಯ್ಯೋ ನಡುಗಲು
        ಹೂದೊಡವನು ಮರ ಕಳಚುತಿರೆ,
ಗೆಣತಿಯರೊಡನೊಡನಾಡುತಲೊಲೆಯುತ
        ನಗುತ ಕುಣಿದು ನೀ ಬರೆ ಚೆಲುವೆ
ಕಿಲಕಿಲನಲೆಯಲೆ ನಗು ಹೊಳಲಿಟ್ಟಿತು
        ಮೊಗ್ಗುಗಳಾಽಯೆಂದರಳಿದವು !....

ದಂತದ ಬೊಂಬೆಗೆ ರೇಸಿಮೆ ಸೀರೆಯ–
ನುಡಿಸಿದವೊಲು ಮೆಯ್ ಸಿಂಗರಿಸಿ
ನಡೆದು ಬರುವ ಆ ಸೊಬಗೇನೆನ್ನಲಿ
ಹೊಸಯಿಸಿತಹ ಸರ್ವಸ್ವವನು
ಕಾಮನಬಿಲ್ಲೇ ಕುಣಿದೊಲು ನಿರಿನಿರಿ
ಕಂಪಿಸಿ ನೀರಾಗಿಳಿದಿರಲು
ಸುತ್ತಣ ಚೆಲುವನು ಕುಡಿವ ತುಳುಕಿಸುವ
ಕಣ್ಣ ಮಿಂಚು ಮುಗಿಲಲೆಯುತಿರೆ....

ನಿನ್ನಡಿ ಸೋಂಕುವ ಬಗೆಬಗೆ ಬಣ್ಣದ
ಹೂಗಳು ಹುಲ್ಲಿನ ಮುತ್ತುಗಳು
ಕುಣಿದವು—ಸರಸಕ್ರೀಡೆಯಲೆಡೆಯೆಡೆ
ತೂಗಾಡುತ ಬರೆ ತುಂಬೆಯೊಲು
ಮಿಡಿಸಾಗರದೊಲು ಹೆಡೆಯಾಡಿಸುತಿಹ
ಸುಳಿಗುರುಳುರುಳನು ಮಿಡಿಕುಡಿಯು
ಚುಂಬಿಸಿ ಜುಮ್ಮನೆ ಉಯ್ಯಲೆಯಾಡಿತು
ಅರಳಿತು ಮೃದು ಹೂ ದಳದಳವು!....

ಸೊಬಗಿನಲೊಲೆಯುತ ಮುದುಮುಗಳೊಲು ಬಹ
ಸಿರಿಸೊಬಗಿನ ಚಿಂತಾಮಣಿಯೆ
ಮೆಯ್ ಮರವಾಗಿದೆ ಬಗೆ ಬೇರಾಗಿದೆ
ಬರವಿಗೆ ಅರಿವೇ ಅಳಿಯುತಿದೆ
ನನ್ನೊಡೆತನದೀ ನೆಲವೆಡೆ ದಾಳಿಯ
ನಡೆಸುವ ನನ್ನಯ ಇನಿ–ಹಗೆಯೆ
'ಕುಶಲವೆ ಬರವೆ' ಂದೆನ್ನುವುದೆಂತೋ
ಮನ ವಿಸ್ಮೃತಿಯೊಳಗುರಿದಿರಲು....

ಹರಿಯದ ಹಾಡಿನ ವರ್ಣತಾನಗಳು
ಹೆಣೆದಿರೆ ಚೆಲುವಿಂ ನೂಲಿನೊಲು
ಚಿತ್ರವಿತಾನವ ಮುಗಿಲಿಗೆ ಬೀಸಲೆ
ಪಚ್ಚೆಯ ಜೊಂಪಲು ಜೋಲುವೊಲು ?
ತಿಂಗಳುಬೆಳಕಿನ ಹಾಲ್‌ಜೇನ್‌ಗನಸಿನ
ಚಿತ್ರವಿಚಿತ್ರದ ರೇಸಿಮೆಯ
ಹೂಹಾಸನು ನೆಯ್ದೆದೆಯೊಳಗಿರಿಸಿದ
ಸುರುಳಿಯ ಹಾಸಲೆ ನಿನ್ನಡಿಗೆ?....

....ಬಂದೆಯ ಎನ್ನುವ ಬಾಯ್ ಬೆರಗಾಗಿರೆ
ಸ್ವಾಗತದೆಸಕವ ನೆನೆಯುತ್ತಿರೆ
ಕ್ಷಣವೂ ನಿಲ್ಲದ ಅತಿಥಿ ಅಪ್ಸರೆಯು
ತೆರಳಿದಳೋಹೋಽ ಬಂದವೊಲೆ....
ಪುಳಕದಿ ನಡುಗುವ ನೆಲ ನಿಷ್ಕಂಪಿತ
‘ಓಹೋ!’ ಎಂದವು ಹಕ್ಕಿಗಳು
ಪರಿಮಳ–ಕೆನೆ–ಮುಗಿಲೋಡಿತು ಸಂಗಡ
ಗಾಳಿಯೊ ನಿಂತಿತು ನಿಡುಸುಯ್ದು....

ಮೃದುಪದಪಾತಕೆ ನೆಲದಲಿ ಮೂಡಿದ
ಗುರುತುಗಳನು ಹೂ ಮುಚ್ಚಿದವು
ಬಗೆಯ ದಾರಿಯಲೊ ಜೇಸಿ ಪರಿಯೆಸಲು
ಶಂಖಚಕ್ರ ಸ್ಥಿರ ಮುದ್ರಿಸಿದೆ....
ನಿನ್ನಯ ಪದವೋ ನಡೆದಿತು ಮುಂದಕೆ
ಪಲ್ಲವಿಯೊಂದೇ ಉಳಿದಿರಲು
ಅದನೇ ಹಾಡುತ ನಿಲ್ಲುವೆ ಹಿಂದಕೆ
ವರ್ಣವರ್ಣಕೆದೆ ಕರಗಿರಲು :

‘ ನಿರಿನಿರಿ ಚಿಮ್ಮಿಸಿ ನಡೆದುಬರೆ
ನೀ—ನಿರಿನಿರಿ ಚಿಮ್ಮಿಸಿ ನಡೆದುಬರೆ
ಮೆಯ್ ನವಿರಲು ನೆಲ ನಡುಗಿತು, ಎಲರಲಿ
ಮೆಲಮೆಲನಲರಲೆದುದುರಿದವು
ಒಲವಿನ ಹೂಮಳೆ ಸುರಿಯುವೊಲು....’

---

## ೩. ಮೇಘಕನ್ಯೆಯ ಕಂಡು

ಹುಲ್ಲು ಕೊಳವೆಯ ಕಳ್ಳಿ ಹಾಲಿನೊಳಗಿಟ್ಟೂದಿ
ರತ್ನವರ್ಣದ ಚಿತ್ರಗೋಲಗಳು ತೇಲುತಿರೆ,
ನೋಡಿ ಚಪ್ಪಳೆಯಿಕ್ಕಿ (ಹಕ್ಕಿ ಹಾರಲು ಬೆದರಿ)
ಕೇಕೆಹಾಕಿವೆ ಮಗುವು. ಸ್ವಪ್ನಬುದ್ಬುದ, ತಾರೆ,
ಮುಗಿಲ ಬೂರುಗದ ಹೊರೆಹೊರೆಗಳಿಗೆ ತೊಡಿಸುವುದು
ಮಣಿಹಾರ, ಆ !—ಎಂದು ಕಾಯುತಿರಲಯ್ಯಯ್ಯೊ
ಮೂರುದೂರಕೆ ಮಂಗಮಾಯವಾಗುವುವೆಲ್ಲೊ.
ಮಣಿಮಾಲೆ ದಿವಕೆ?—ಕನಸೊ ಮಗು! ಕ್ಷಿತಿಗಶ್ರುಮುಕ್ತಕಮಾಲೆ.

ಪಾಪ!....ನೋಡಿವೆಯ ಈ ಹುಡುಗು, ಹುಚ್ಚುಬರಡು?
'ಹಾಲ್ದಿಂಗಳಿಳಿಯೆ ತಿರೆ ಮೆಯ್‌ಗೊಟ್ಟು ಚೆಲುವಹುದು,
ಅದನೆ ಬಯಸಿದಕಡಲೊ—ಒಡಲು ಕುದಿದುಕ್ಕುವುದು,
ಬಯಕೆಗುರಿ ಚೆಲುವು, ತೃಪ್ತಿಗೊ ಅಮೃತ!'....ಕಿವಿಕಿವುದು?
ಮೇಘಕನ್ಯೆಯ ಕಂಡು ಮನದಿ ಕುದಿಯುವ ಮರುಳ
ನೆಲದಿ ನಿಂತಿಂತು ನೀನೆಂತು ಪಡೆಯುವೆ ಅವಳ?

---

## ೪. ಮೊದಲನೋಟದ ನೆನಪು

ಹೇಮಂತದಂತ್ಯ. ಬೆಳಕು ಹರಿದಿಲ್ಲ; ಬ್ರಾಹ್ಮೀಮುಹೂರ್ತ ;
ಬೆಳಕ ಮೇಲುಡುಪ ಛಾಯೆ ತೆಳುವಾಗಿ ತೇಲಿದಂತಿದೆ ಈಗ.
ಮಂಜು—ನಿದ್ದೆ ತಿಳಿಯುವ ಮೊದಲ ಹಾಲ್ಗನಸಿನೊಲು
ರಮ್ಯಶೀತಲ; ಸುಖದೊಳೆಳೆದಂತೆ ಉಸಿರು ತುಸುಬಿಗಿ, ಕೊಂಕು.
ಶೀತಲಕೆ ಪೂಬಿಸಿಯನಿತ್ತ ಸುಖದ ಈ ಬಿಗಿಗೆ
ರೋಮಾಂಚಗೊಂಡಿದೆ ಮೊಗ್ಗು, ದಳದಳ ವಿಕಂಪಿಸಿದೆ ...
ಏನೋ ಲಲಿತತರ ಮೋಹ, ಏನೋ ಮೃದುವಾದ ಮಾದಕತೆ.
ಏನೋ ಮೆಲುತೇಲು ಮಾಯೆ—ಯಕ್ಷರಮಣೀಯ.

* * *

ಸರ್ವಮಂಗಲೆ, ನಿನ್ನ ಮೊದಲನೋಟದ ನೆನಪು
ಮೆಲುತೇಲುಮುಸುಕು, ಹೂವನರಳಿಸುವ ಮಂಜು—ಶೀತಲರಮ್ಯ !
ಚಂದನದ ಚಂದ್ರನ ತಣ್ಪು; ಹೂಬಿಸಿಯ ಶ್ರೀಗಂಧದೊಡಲು....
ಆಶ್ಚರ್ಯ! ಮುಸುಕುಮಂಜಿಗೂ ಬಂದಿಹುದು ಮೃದುಪರಿಮಳದ ಹೊನಲು !



## ೫. ಕುಣಿತಕಿದೆ ಸೋಲು ಮಣಿತ

ನಿನ್ನ ಮೆಯ್ಯಲಿಹ

ಚೆಲುವ ಕೈಚಳಕ-

ಕಿದೆ ಅಮೃತಪುಳಕ-

ವೆನ್ನ ಮೆಯ್ಯಲ್ಲಿ

ನಿನ್ನ ಮುಖದಲಿಹ

ನಗೆ ನವಿಲ ಸೋಗೆ-

ಗಿದೆ ಬಗೆಯ ಬೇಗೆ

ಎನ್ನ ಮುಖದಲ್ಲಿ

ನಿನ್ನ ಕಣ್ಣೊಳಿಹ

ಗೆರೆಮಿಂಚು ಕುಣಿತ-

ಕಿದೆ ಸೋಲು ಮಣಿತ-

ವೆನ್ನ ಕಣ್ಣಿನಲಿ

ನಿನ್ನ ಮನದಲಿಹ

ಬಾಳ ಹಾರೈಕೆ

ಹಕ್ಕಿಗಿದೆ ರೆಕ್ಕೆ

ಎನ್ನ ಮನದಲ್ಲಿ

ನಿನ್ನ ಎದೆಯಲಿಹ

ಪುಟಬಲವಿನೊರತೆ-

ಗಿದೆ ಹಸಿವು ಕೊರತೆ

ಎನ್ನ ಎದೆಯಲ್ಲಿ

ನಿನ್ನ ಆತ್ಮಕಿಹ

ಮೆಯ್ಯುಳಿದ ಮಿಲನ-

ದಾಸೆಗಿದೆ ಹವನ-

ವೆನ್ನ ಆತ್ಮದಲಿ

## ೬. ಎನ್ನ ಮುದ್ದಿನದಲ್ಲದಿನ್ನಾರವು

ಹಿಂದಿನಿಂದಲೆ ಬಂದು ಕಣ್ಣಿಗೊತ್ತಿದ ಕೈಯಿ-
ದೆನ್ನ ಮುದ್ದಿನದಲ್ಲದಿನ್ನಾರವು?

ಮೂಕ ವೀಣೆಯು ಮಿಡಿದು ಕೊರಡ ಕುಡಿಯೊಡೆಸಿರುವ
ವೀಣಾಪ್ರವೀಣೆ, ನಿಡು ಬೆರಳುಗಳಿವು
ಸುಳಿಯಿಸಿದ ತಾನತಾನದ ಗುಂಗು ಮೈಯ್‌ದುಂಬಿ
ಬೆರಳ ನಾಡಿಯು ರಕ್ತವದರ ಸರಿಗಮಪದನಿ-
ಯನು ಗುಣಿಸಿ ಗುಣುಗುಣುಸಿ ಸಾಗಿನಡೆದಿರಲು
ಹಿಂದಿನಿಂದಲೆ ಬಂದು ಕಣ್ಣಿಗೊತ್ತಿದ ಕೈಯಿ-
ದೆನ್ನ ಮುದ್ದಿನದಲ್ಲದಿನ್ನಾರವು?

ನಿನ್ನ ದೇಹದ ಚೆಲುವ ಮುತ್ತಿಡುವ ಕಣ್ಣುಗಳ-
ನೊತ್ತಿ ಅಲ್ಲಿಯು ಮತ್ತೆ ಚೆಲುವ ಕೈಗಳನು
ಮುಚ್ಚುಗಣ್ಣಿಗೆ ಹಚ್ಚಿ ಮೈಯ್‌ರಕ್ತ ಜುಂಗುಟ್ಟಿ-
ಲದರ ಬಿಸಿ ತಾಕಿಹುದು; ಹರಳುಂಗುರದ ಬೆರಳು
ಪುಳಕಗೊಂಡದಿರುತಿರೆ ಮಿಲನಕಾತರದಿ
ಹಿಂದಿನಿಂದಲೆ ಬಂದು ಕಣ್ಣು ಮುಚ್ಚಿದ ಕೈಯಿ-
ದೆನ್ನ ಮುದ್ದಿನದಲ್ಲದಿನ್ನಾರವು?

ಕೆನ್ನೆ ತಾಕಿರುವ ಕೈಬಳೆಗಳುಸಿರಿವೆ ಕಿವಿಗೆ
ತನಗೆ ಸೌಂದರ್ಯಚೇತನವನಿತ್ತ
ತನ್ನ ಒಡತಿಯು ಹೆಸರ; ಅಬ್ಬಬ್ಬ, ಎಲೆ ಜಾಣೆ!
ಗಾಳಿ ತಡೆದೀತೇನೆ ಹೆರಳ ಮಲ್ಲಿಗೆ ಮುಗುಳ-
ಗಂಪನೆನ್ನೆಡೆತರದೆ? ಇದು ಹೊಸದೆ ನನಗೆ?

ಹಿಂದಿನಿಂದಲೆ ಬಂದು ಕಣ್ಣು ಮುಚ್ಚಿದ ಕೈಯಿ–
ದೆನ್ನ ಮುದ್ದಿನದಲ್ಲದಿನ್ನಾರವು ?

ಹಹ್ಹ ಹಹ! ಹೇಗಾಯ್ತು ? ನೀನೆ ಸೋತುದು ಮೊದಲು!
ಕೈಜಾರಿ ಕೊರಳಿನಲಿ ಮಾಲೆಯಾಯ್ತೇಕೆ ?
ಹೂಗಲ್ಲವೆನ್ನ ಭುಜವೇರಲೆಂದಪ್ಪಣೆಯ
ನಾನು ಕೊಟ್ಟೆನೆ ನಿನಗೆ? ಎಲ್ಲಿ ಕೈ, ಇಲ್ಲಿ ತಾ....
ಕೆಂಪು ಚಿಮ್ಮುವ ಹೂವಿದೆಷ್ಟು ಕೋಮಲವೆ!

---

# ೭. ಬರಲಿ ಇಲ್ಲಿ!

ಸೀರೆ? ನೀರಿಯ ಸದ್ದು?
        ನನ್ನವಳು ಬಂದಳೆ?
ಕೆರೆಯ ಅಲೆಯುಲೆ; ಸರಸ—
        ನನ್ನವಳು ಬರಲಿಲ್ಲ

ಬಳೆಯ ಕಿಂಕಿಣಿ ಶಬ್ದ?
        ನನ್ನವಳು ಬಂದಳೆ?
ಕುಣಿಯುವೆಳೆಗರು, ಗೆಜ್ಜೆ—
        ನನ್ನವಳು ಬರಲಿಲ್ಲ

ಪರಿಮಳವಿದೆಲ್ಲಿಯದು?
        ನನ್ನವಳು ಬಂದಳೆ?
ತೇಲಿಬಂದಿತು ಗಾಳಿ—
        ನನ್ನವಳು ಬರಲಿಲ್ಲ

ಕೆಂಬೆಳಕ ಸೆಳೆಮಿಂಚು?
        ನನ್ನವಳು ಬಂದಳೆ?
ಬಿಸಿಲಲೆವ ಮುತ್ತುಗವೊ—
        ನನ್ನವಳು ಬರಲಿಲ್ಲ

'ನಾನು!'—ಯಾರದು, ಯಾರು?
        ನನ್ನವಳು ಬಂದಳೆ?
'ನಾನು!'—ಹಾಡಿತು ಹಕ್ಕಿ—
        ನನ್ನವಳು ಬರಲಿಲ್ಲ

ಕೆರೆಯ ಬಳಿ ಅರೆತಾಸು ನೀರಾಡಿ ಮೇಲೆದ್ದೆ
ನನ್ನವಳು ಬರಲಿಲ್ಲ
ಆಲದಡಿ ಕಣ್‌ಮುಚ್ಚಿ ಕುಳಿತು ಕನಸುಂಡೆದ್ದೆ
ನನ್ನವಳು ಬರಲಿಲ್ಲ
ಮರಗಿಡಗಳೆಲ್ಲವನು ಮಾತನಾಡಿಸಿ ಬಂದೆ
ನನ್ನವಳು ಬರಲಿಲ್ಲ

ಚಿಕ್ಕ ರಂಜಲನಾಯ್ದೆ, ಆಯ್ದರು
ಎಳೆಯ ಚಿಗುರನು ಕೊಯ್ದೆ, ಕೊಯ್ದರು
ಅವಳಿಗೆಂದಿದ ನೆಯ್ದೆ, ನೆಯ್ದರು
ನನ್ನವಳು ಬರಲಿಲ್ಲ
ನನ್ನವಳು ಬರಲಿಲ್ಲ
ನನ್ನವಳು ಬರಲೆ ಇಲ್ಲ!

---

## ೮. ಹತ್ತು ಕೊಡುವಲ್ಲಿ....

ರತ್ನಗಂಬಳಿ ಹಾಸು; ಉರುಳು ಮುಗಿಲಿನ ಸುರುಳಿಯೆನೆ ಒರಗಿಸಿಂಬು;
ಧೂಪಧೂಮದ ಗೀಚುಗೆರೆ; ವೀಣೆ—ಎದೆನಾಟುವಂಬು;
ಪನ್ನೀರು, ಹೊಸರೋಜ; ತೆರವಾದ ತುಂಬುದುಪ್ಪಳದ ತಲ್ಪ;
ಕೇಸರಿಯ ಕೆನೆಹಾಲು; ತಾಂಬೂಲ—ಚಾರುನಖಶಿಲ್ಪ!....
....ನನಗಾಗಿದೆನಿತ ಸಂಭ್ರಮಿಸಿರುವೆ ಹೇ ಮುಗ್ಧೆ!
ಕೇಳಿಲ್ಲವೇ, ಪುರಾತನಸೂಕ್ತಿಯಿಹುದೊಂದು:
'ಹತ್ತು ಕೊಡುವಲ್ಲೊಂದು ಮುತ್ತು ಕೊಡು' ಎಂದು!

---

## ೯. ನಾಲ್ಕು ಮುತ್ತುಗಳು

[ಎದುರು ಕುಳಿತಿರುವ ಪ್ರೇಯಸಿಯನ್ನು ಕುರಿತು :]

ಮುತ್ತಿನ ಬೇಸಿರಿ ಮುತ್ತಿನ ಬೆಂಡೋಲೆ
ಮುತ್ತಿನ ಪದಕ ಎದೆಹಾರ
ಮುತ್ತಿನ ಪದಕ ಎದೆಹಾರ–ಕೆನ್ನೆಗೆ
ಮತ್ತೊಂದು ಮುತ್ತು ಬಹಳಲ್ಲ!

* * *

ಕಣ್ಣು ಕನಿದುದು ಸಾಲದೆಂದು ತುಟಿ ಕಂಪಿಸಲು
ಮತ್ತದೂ ಸಾಲದೆಂದರೆ ಅರಳಲು
ಕೆನ್ನೆಯಲಿ ಗುಳಿಬಿದ್ದು ದಿಕ್ಕು ತೋರಿದರೇನು
ಕಂಡುಕಂಡೂ ಗಂಡು ಸುಳಿಗಿಳಿಯನು!

* * *

ವಾರವಾರಕೆ ಜಡೆಪೆ ಉಪ್ಪುಮೆಣಸನು ಸುಳಿದು
ದೃಷ್ಟಿತೆಗೆಯುವುದೆನಗೆ ಬೇಡವಿನ್ನೆಂದು,
ಹೇಳುವೆನು ಅಮ್ಮನಿಗೆ, ಕೋಣೆಯಲಿ ತೂಗಿರುವ
ನನ್ನ ಚಿತ್ರಕೆ ದೃಷ್ಟಿತೆಗೆಯಬೇಕೆಂದು;
ನನಗೆ ಸೋಂಕುವುದೆಲ್ಲೊ ಹಾದಿ ಹಾಯ್ ಮಿಂಚದೊಂದು,
ಅತಿ ತೀಕ್ಷ್ಣವಪಕೆ ತಾಗುವ ನಿನ್ನ ದೃಷ್ಟಿ–ದುಂದು!

* * *

ನನ್ನವಳ ಕೆನ್ನೆಯನು ಸವರಿ ತುಟಿ ತುಂಬಿಸುತ
ಕುಡಿಹುಬ್ಬುಮೇಲೆ ಬೆರಳಾಡಿಸುತ ಚುಂಬಿಸುತ
ಕಣ್ಣ ಕನ್ನಡಿಯೊಳಗೆ ಪ್ರಿಯನೆನುತ ಬಿಂಬಿಸುತ
ನನ್ನ ಪ್ರತಿಸ್ಪರ್ಧಿಯೆನೆ ಸಂಚಿನಲಿ ಬಂದವನೆ,
ಓ ಸಿಟ್ಟೆ, ಶಕ್ತಿಯಿದ್ದೊಡೆ ಬಾರ ಕೆಳಗಿಳಿದು
ನನ್ನೊಡನೆ ಕಾಳಗಕ್ಕೆ!

## ೧೦. ನಿನ್ನ ಹೆಸರು

ಮಧುರಸ್ವಪ್ನದ ಸಲಿಲಕ್ರೀಡೆಯೊಳು ಕುಳಿತೆನ್ನ
ಕೂದಲನು ಕೆದರಿ ಕಚಕುಳಿಯಿಟ್ಟು ಓಡಿ
ಹುಡುಗಾಟವೇನೆಂದು ರೇಗಿ ತಿರುಗಲು ಹೆದರಿ
ಮರದ ಎಲೆಗಳಲವಿತು ಬಳ್ಳಿಗಳ ತೂಗಿ
ತಂಗಾಳಿಯುಸುರುವುದು ನಿನ್ನ ಹೆಸರ

ಹಸಿರುಬಲೆಯುತ್ತರೀಯದ ಮುಸುಕನೋಸರಿಸಿ
ಮೇಲುಗುವ ನಗೆಯು ತುಟಿಕಚ್ಚಿ ತಡೆವಿಡಿದು
ಹಾತೊರೆವ ಕಣ್ಣುಗಳು ಮುಯ್ಯ ಮುತ್ತಿಟ್ಟಿರಲು
ಎವೆಚಿವುಟಿ ಪಿಸುಗುಡುವನೊಡನೆ ಬಾಯ್ಬಿರಿದು
ಮುಗುಳಮುಗುದೆಯರಿವರು ನಿನ್ನ ಹೆಸರ

ಕೆರೆಯ ತಿಳಿನೀರಿನಲಿ ಕನಸುಂಡು ತೇಲುತಿರೆ
ದಡದಿ ನಿಂತೆನ್ನ ಫಕ್ಕನೆ ಕಂಡು ನಾಚಿ
ಮುಳುಗಿ ಮೇಲೆದ್ದು ಬಳಿ ಪುಷ್ಪಮಂಟಪವಿರಲು
ಚಿತ್ತಳಿಯ ಬಿಳಿಯ ಬೆಡಗಿಯರತ್ತ ಸಾರಿ
ದಳದಳದಿ ಕೊರೆಯುವರು ನಿನ್ನ ಹೆಸರ

ನಕ್ಕೊಮ್ಮೆ ನಡೆಯುವೆನೆ ಹಾದಿಬದಿಯೊಳಗಲ್ಲಿ
ಹಸಿರುಡುಗೆಯೆಸೆಯೆ ಕಣ್ಸೆಳೆದು ಕೊನೆದಾಡಿ
ಹುಲ್ಲುಹಸೆಗರೆಬಾಗಿ ಪ್ರೌಢವನವಧುಗಳಿದೊ
ಬಳ್ಳಿ ಬೆರಳನು ನೀಡಿ ಹೂವ ಚೆಲ್ಲಾಡಿ
ರಂಗೋಲೆ ಬರೆಯುವರು ನಿನ್ನ ಹೆಸರ

ಮಧುರಧ್ವನಿಯಲೆದುಬರೆ ಕಿವಿಯರಳಿ ನಿಲ್ಲುವುದು
ಒಮ್ಮೆಗೇ ನೂರ್ಕೊರಲ ಮೇಳವುಕ್ಕುವುದು
ಹಾಡಿನೊಂದೆಳೆಯೊಡನೆ ಹೆಣೆದು ಚಿತ್ತಾರಗಳ
ಎಲ್ಲೊ ನಿಂತಾರನೋ ಎದುರು ಕುಣಿಸುವೊಲು
ಹಕ್ಕಿಗಳು ಮೆರೆಸುವುವು ನಿನ್ನ ಹೆಸರ

ಇದ್ದಕಿದ್ದಂತೆ ಬಾನ್ ಬಾಯ್ಬಿಟ್ಟು ಗುಡುಗಲಿದೆ
ಓ ಚೆಲುವೆ, ನಿನ್ನ ಹೆಸರ !
ಒಡನೆ ದನಿಗೊಟ್ಟು ಭೂಮಿಯು ಹಾಡಿ ನಡುಗಲಿದೆ
ಓ ಚೆಲುವೆ, ನಿನ್ನ ಹೆಸರ !

---

## ೧೧. ಯಾವ ನೆನಪು?

ಯಾವ ಲೋಕವೊ ಏನು ಜನ್ಮವೊ
ಎಲ್ಲೊ ನೀ ಎನ್ನೊಳಗಿನೇನನೊ
ಸೆಳೆದು ಸೆರೆಹಿಡಿದೊಯ್ದೆಯಾ?
ಅದನು ನಿನ್ನೊಳು ನೆಯ್ದೆಯಾ?

ನೋಡುತಿರಲಿರಲೊಮ್ಮೆ ನಿನ್ನನು
ಯಾವುದೋ ಅಸ್ಪಷ್ಟ ನೆನಪಿನ
ಛಾಯೆ ಚಿತ್ತದಿ ಕೆರಳಿದೆ
ಮರ-ಮರಳಿ ನರಳುತ ಹೊರಳಿದೆ

ಗರುಕೆಯಂಚಿನ ಹನಿಯ ನೆಕ್ಕಲು
ನೆನೆವುದೊಣನಾಲಗೆಯು ಫಕ್ಕನೆ
ಕಡಲೊಡಲ ಇಡಿ ಹೀರಿದ
ಪೂರ್ವಸ್ಮೃತಿಯನು ಮರೆತುದ

ನೆನಪದಾವುದೊ ಕತ್ತಲಲಿ ಕಣ್-
ಮುಚ್ಚೆ ಮುತ್ತಿಡುತೆಲ್ಲೊ ಕ್ಷಣದಲಿ
ಮಾಯವಾದರು ಅಳಿಯದೆ
ತುಟಿಯೊಳಗೆ ರುಚಿಯುಳಿದಿದೆ

ಯಕ್ಷನಗರಿಗೆ ಬೊಟ್ಟು ಚಾಚಿದ
ತಾರೆಗಳ ತೆರ ಮಿನುಗುತಿಹ ಕಣ್
ಕಳಕಳದಿ ನಳನಳಿಸಿವೆ
ಆಳದರಿವಿರವೆಳೆದಿದೆ

ಗರ್ಭಗುಡಿಯೊಡಲಿಂದ ವೊಳಗುವ
ಮೊರೆದು ಮಾರ್ದನಿಗೊಡುವ ನಾದನೊ–
ಳೇನೊ ಕಂಡೊಲು ಮರೆಯಲಿ
ಅ–ವ್ಯಕ್ತವನು ಅರೆಯರಿವಲಿ,

ವಿರಹರಾಗದ ತಾನಸೋಪಾ–
ನಗಳನೇರುತ ರಸಸರಸ್ಸಿಗೆ
ಭಾವದೊಂದೇ ಭರದಲಿ
ಚಿತ್ತ ಧುಮುಕುವ ತೆರದಲಿ,

ನಿನ್ನ ಕಣ್ಣಿನೊಳುರಿವ ಕಾಂತಿಯ
ಕಿರಣದಾಕರ್ಷಣಕೆ ಸೋಲುತ
ಧುಮುಕುವುದು ಬಗೆ ತಡಕುತ
ಅಂತರಾಳವ ಹುಡುಕುತ

ನಾದ ಕರಗಲು ರಾಗವಿಳಿಯಲು
ತಿರುಗಿ ಮೌನವೆ ಕಿವಿಯ ತುಂಬಲು
ಕಂಡುದಿನಿತೂ ಮರೆತೊಲು
ಆತ್ಮಕನುಭವ ಬೆರೆತೊಲು,

ತುಳುಕುಬೆಳಕಿನ ಕೊಳವನಿಳಿಯಲು
ಮನದ ಮೆಯ್ ಅರಿವಿನಲಿ ಉರಿವುದು
ಹೊರಗೆ ಬರುವುದನಂತರ
ಮತ್ತೆ ಮರೆವು ನಿರಂತರ

ಮುಗಿಲಿನಲಿ ಗರಿಗೆದರಿ ಅಲೆಯುವ
ಜೀವ ವಿಹಗವು ಮಣ್ಣಿನೆಳೆತಕೆ

ಮತ್ತೆ ನೆಲಕಿಳಿದೊದರಿದೆ
ಅರಚಿ ರೆಕ್ಕೆಯ ಮುದುರಿದೆ

ಸೂರ್ಯಸದನಕೆ ಧಾವಿಸಿದ ಮನ
ವೇಗಶಕ್ತಿಯನಿಳಿಸಲಾಗದೆ
ತಿರುಗಿ ಗುಡಿಲಿಗೆ ಹಾರಿದೆ
ಮೂಲೆಗತ್ತಲ ಸೇರಿದೆ

ಗರ್ಭದಾಳದಿನಾವುದೋ ಶಿಶು
ನರಳುತೊರಲಿದೆ; ಏನನರಚಿತೊ
ಅರಿಯದಿದ್ದರು ಚಿತ್ತಕೆ
ಮೆಯ್ಯ ನವಿರೊಗೆದೆದ್ದಿದೆ

....ಆಹ್! ಮತ್ತಿದಾವುದೊ ರಾಗ; ಎಲ್ಲಿಯೊ
ಕೇಳಿ ಮರೆತಿಹ ಮೇಳಗೀತೆಯು
ಮರಳಿ ಅರೆ ಮರುಕೊಳಿಸಿದೆ
ಅದರ ನೆಯ್ಗೆಯ ಎಳೆಯಿದೆ

‘ಏನ ನೆನೆವಿರಿ? ಮೌನವೇತಕೆ?’
—ಆಞ್;—ಏನು? ಕರೆದೆಯ? ನಿನ್ನದೇ ದನಿ?
ಸುಳ್ಳೆ? ಶಿಶುವಳಲಿಲ್ಲವೆ?
ಕನಸೆ? ಇದು ಹಾಡಲ್ಲವೆ?

ಅಯ್ಯೊ! ಏನಿದು ಮರೆವು? ಮರೆವಿನ
ಮರೆವು!....ಕಾಡೊಳು ಹಾದಿದಪ್ಪಿದ
ಬಗೆಯ ಬಯಲಿಗೆ ತಂದರೂ
ಬಯಲೊ ಬಯಲಿದು ಎಂದಿಗೂ

'ಬಯಲು ಬಯಲೋ ಎಂದಿಗೆಂದಿಗು'
ಎಂದು ಕೆರಳುವ ಒಡಲ ಕೆಂಡವು
ಸುಡುವುದೇತಕೊ ದೇಹವ
ಏಕೆ ಬೆಳೆಸಿತೊ ನೇಹವ!

ಮಣ್ಣನುಂಡೇ ಬೆಳಕ ಕುಡಿವೆನೆ
ಇಲ್ಲ ಬೆಳಕಿಗೆ ಮಣ್ಣ ಬಿಡುವೆನೆ
ಒಳಿತು ಹಾದಿಯದಾವುದೋ
ಸುಖವೊ, ಮೆಯ್ಯನು ತೇವುದೋ

ಏಕೊ ಆಂದೋಲನವು ಕ್ಷೋಭೆಯು
ಸಾಲದೇನೀ ಮಣ್ಣ ಬೊಂಬೆಗೆ
ನೀನು ಕುಳಿತಿರಲೆದುರಲಿ
ಚೆಲುವಿರಲು ಬದಿಬದಿಯಲಿ

....ಚಿತ್ತಕೇಳದು, ಕತ್ತಲಲ್ಲಿಯೆ
ಅರಸುತಿದೆ 'ತಾಯ್ ಬೇರದೆಲ್ಲಿದೆ
ವೃಕ್ಷವೀ ಅಶ್ವತ್ಥದ'
–ಎಂದು ಕತ ಅಸ್ವಸ್ಥದ

ಇಲ್ಲಿ ಉರಿಯುವ ದೀಪಮಾಲೆಗೆ
ಮಿಂಚು ಹರಿಸುವ ಶಕ್ತಿಸಂಚಯ–
ವಿರುವ ಜೋಗವದಾವುದೊ
ತರುವ ತಂತಿಯದಾವುದೋ

ಯಕ್ಷಪ್ರಶ್ನೆಯ ಬ್ರಹ್ಮಗಂಟಿದ–
ನಡಗಿಸಿಟ್ಟಿಹ ವಜ್ರಮುಷ್ಟಿಯೆ

ಕಾಣದಿರಲದ ಬಿಡಿಸುವ
ಬಗೆಯದಂತೆಳೆ ಕಡಿಸುವ ?

*　　　*　　　*

....ಸಾಕುಸಾಕೆಂದಿತ್ತ ತಿರುಗುವೆ,
ಮತ್ತೆ ನೀನೇ! ಮತ್ತೆ ನಗುಮೊಗ!
ಕೆದರುಗರಿ–ಉರಿ–ಕಂಗಳು
ಕುಡಿಯೆನುವ ಬೆಳುದಿಂಗಳು !

ಯಾವ ಲೋಕವೋ ಏನು ಜನ್ಮವೋ
ಎಲ್ಲೋ ನೀ ಎನ್ನೊಳಗಿನೇನನೋ
ಚೆಲುವೆ, ಸೆರೆಹಿಡಿದೊಯ್ದೆಯಾ ?
ಒಲವೆ, ನಿನ್ನೊಳು ನೆಯ್ದೆಯಾ ?

---

## ೧೨. ನೀನೊಂದದ್ಭುತರಮ್ಯಪ್ರಪಂಚ !

ಮನ–ದಂಚನು ಮುಂಚುವ ರಾಗಭಾವಗಳು
ಚಿನ್ನದ ರೆಕ್ಕೆಯ ಚಂಚಲ ಮಿಂಚಿನ
ಪಂಚವರ್ಣದರಗಿಳಿಗಳು ಅಳಿಗಳು
ತೂಗುಯ್ಯಾಲೆಯನಾಡುವ ಮಂಚ
ನೀನೊಂದದ್ಭುತರಮ್ಯಪ್ರಪಂಚ

ಒಲವಿನ ಹೃದಯಾಗ್ನಿಯು ಹೋಮಾಗ್ನಿಯು
ಭುಗಿಲುಭುಗಿಲೆಂದುರಿದಿರೆ ಮೊರೆದಿರೆ
ಸಾರಿತು ಬಳಿ ನಿನ್ನಯ ವ್ಯಕ್ತಿತ್ವ
ಜಗದಾದಿಯು ಆ ವಿರಾಟ್‌ಪುರುಷನ
ಯಜ್ಞದ ತೆರ ನೀ ಧುಮುಕಿರಲುರಿಯಲಿ
ಮಲರಿತು ಅದರಿಂದೀ ನವ ತತ್ತ್ವ....
ಇಹಸೃಷ್ಟಿಯ ಅಣುವಾಗಿಹ ವ್ಯಷ್ಟಿ
ಪ್ರೇಮದ ದೃಷ್ಟಿಗೆ ನೀನೆ ಸಮಷ್ಟಿ

ಸರಿಮಿಗಿಲಿದು ಗಂಧರ್ವಪ್ರಪಂಚಕೆ
ಬಾನಂಗಳದಿಂ ತಿಂಗಳು ಸುರಿದಿರೆ
ಲಕ್ಷಲಕ್ಷ ನಕ್ಷತ್ರಗಳರಳಿ
ಶರಧಿಯು ಭರಭರನುಕ್ಕುತಲೇರಲು
ತೆರೆಯಾಟಕೆ ತಿರೆ ಮೆಯ್‌ಗೊಟ್ಟೊರಗಿವೆ
ಸರಸವದಿದು ನಡೆದಿವೆ ಮರಮರಳಿ....
ಒಲವು ಚೆಲುವುಗಳ ಸರಿಸಮಪಾಕ
ಇಳೆ ಕಾಣದುದೀ ಮಂಗಲ ಲೋಕ

ಹಾಲಿನ ಹೋಳಿಯಲೋಕುಳಿಯಾಡುತ
ಬಿಳಿಮುಗಿಲಿನ ರಥದಲಿ ಅಪ್ಸರೆಯರು
ದಿಬ್ಬಣ ಹೊರಟಿಹರಿದೊ ಎಡೆಯೆಡೆಗೆ
ಗಿಡಮರವಚ್ಚರಿಯಲಿ ಮರವಟ್ಟಿವೆ
ಅಮೃತಬಳ್ಳಿಗಳ ಬೆಳ್ಳಿಯ ಸರಪಣಿ
ಶಶಿಶಿಶುಗಳ ತೊಟ್ಟಿಲ ತೂಗುತಿವೆ....
ಭೂಮಿಗು ಬಾನಿಗು ಒಲವಿನ ಕೂಟ
ಇದೆ ನನಗಿರುವಿಕೆಯರಿವಿನ ಪಾಠ

ನೆಳಲ ಬೆಳಕ ಚಿತ್ತಾರದ ನೆಯ್ಗೆಯ
ಹಸೆಗಿಕ್ಕಿವೆ ರಂಗೋಲೆಯ ಮಾಲೆಯು
ಬೊಗಸೆಬೊಗಸೆ ಹೊಸ ಹೂಗಳು ಸುರಿದು
ಯಕ್ಷಕನ್ಯೆಯರು ಕಾದಲರೊಡನಹ
ರಾಸಕ್ರೀಡೆಯನಾಡುವರೆಲ್ಲೆಡೆ
ಕೋಮಲಸುಮವರ್ಷಕೆ ಮೆಯ್ದೆರೆದು....
ಭ್ರಮಣಸ್ಮರಣೆಯ ಮರೆತಿದೆ ಕಾಲ
ನಿಬ್ಬೆರಗಲಿ ಬಾಯ್ದೆರೆದಿಹೆ ಬಾಲ

ವೀಣೆಯ ತಂತಿಯು ಕಂಪಿಸತೊಡಗಿದೆ
ಕಸ್ತುರಿಗಂಪಿನ ಗಾನದ ತೆರೆತೆರೆ
ಅಲೆದಿದೆ, ಗಾಳಿಗೆ ಬಂದಿದೆ ಹರೆಯ
ಅಣುಅಣು ಅನುರಣಿಸಿದೆ ವೀಣೆಯ ಜೊತೆ
ಸೊಗ ಕೆಯ್‌ವಿಸಾರಲು ಮೆಯ್‌ಮರೆತಿದೆ ಜಗ
ಕುಡಿದೊಲು ಜ್ಯೋತ್ಸ್ನಾಸವ ನೊರೆನೊರೆಯ....
ವಿಶ್ವದ ರೂಪ ಸ್ವರೂಪವೆ ಇಲ್ಲಿ
ಪ್ರತಿಯಾಗಿದೆ ಇದು ಅಂಗೈನೆಲ್ಲಿ

ಗಳಗಳನಿಳಿಯುವ ಮುಸುಕುವ ಹಿಮದಲಿ
ದೂರದಿಗಂತದ ಬೆಳಕುಕ್ಕುವ ಕೊಳ
ಕಂಡೂಕಾಣದೆ ಕರೆದಂತಿರಲು
ಬಾಳಿನ ನಾಳಿನ ಚಿಂತೆಯ ಜೊಂತೆಯ
–' ಇಂತಿರೆ ಒಳಿತಿನ್ನೆಂತೋ ಏನೋ ! '–
ಎನ್ನುತ ಬಗೆ ಹೊಗೆ ತಡಕಾಡಿರಲು....
ತರಗೆಲೆ ಮನಕಿದೆ ಇದೆ ವನಚಂದನ
ತುಸು ವಿಶ್ರಮಿಸಲು ನೀನಿಹೆ ನಂದನ

*　　　*　　　*

ಗರ–ಗುಟ್ಟುತ ಭ್ರಮಿಸುವ ಅಗ್ನಿಕುಂಡದೀ
ಬ್ರಹ್ಮಾಂಡದಲಿಹ ಕೆಂಡತಂಡಗಳು
ಸೂರ್ಯಚಂದ್ರಗ್ರಹ ತಾರಾ ಬಳಗವು
ತೂಗುಯ್ಯಾಲೆಯನಾಡುವ ಮಂಚ
ನೀನೊಂದ್ಭುತರಮ್ಯಪ್ರಪಂಚ !

---

# ೧೩. ಬ್ಯಾರಲ್ಲ ಇದು ಒಲವಿನ ಭಾವಗಣಿತ

ನಡೆದರೆ ಹರೆಯದ ದಿಬ್ಬಣವೊ
ಆಕೆ–ನಿಂತರೆ ಚೆಲುವಿನ ಸಿಂಗಾರವೊ
ಆಹ–ಕುಂತರೆ ಕನಸಿನ ಚಪ್ಪರವೊ!

ತಿಂಗಳ ತೆರೆಯಾಗಿ ಸರಿದವೊ ಸೆರಗು
ನೆಳಲಾಗೆ ಬೆಳಕಾಗೆ ಹರಿದವೊ ಬೆರಗು
ಬಾನಿನುಗುವ ಹಾಲ ಕುಡಿದವೊ ಕಣ್ಣು
ಹಸಿರಾಗಿ ಹೂವಾಗಿ ಮಿಡುಕ್ಯಾವೊ ಮಣ್ಣು
ತುಂಬುಮೆಯ್ ಗರುವಕೆ ನವಿರೆಲ್ಲ ನಿಗುರಿ
ಮಿರಮಿರ ನಡುಗ್ಯಾವೊ ಆರಿಲ ಬುಗುರಿ
ಅಣ್ಣ–ಮುಗಿಲಲ್ಲ ಕಡಲಲ್ಲ ಹಾಡಲ್ಲವೊ
ಇಲ್ಲಿ–ಏನೋಽಽ ಅದಂಥ ಅದ್ಭುತವೊ!
ಹೇಳುವುದೆಂತದ ನುಡಿ ಸಣ್ಣವೊ
ಆಕೆ–ನಡೆದರೆ ಮಿಂಚಿನ ದಿಬ್ಬಣವೊ!

ಗುಡ್ಡದ ಮ್ಯಾಲೊಂದು ಗುಡ್ಡ ಮೂಡಿ
ಗುಡ್ಡದ ಹಿಂದೆ ಚಂದ್ರಮ ಮೂಡಿ
ಇಲ್ಲಿ–ಕಣ್‌ಗರಿಯಾಡಿಸಿ ನಿಂತಾಳೆ ಹುಡುಗಿ
ನೆಲಕ್ಹ್ಯಾಂಗೆ ಇಳಿದಳೊ ಬಾನಿನ ಬೆಡಗಿ?
ಈ ಒಂದು ಥಾಟಿಗೆ ಎಲ್ಲಿ ಸರಿಸಾಟಿ?
ಜುಂಗೆದ್ದ ಚಿಗರಿಯೊ–ನಿಂತದ್ದು ಬೆದರಿ!
ಹೂವಿನ ಬಳ್ಳಿಯೊ–ಚಪಲದ ಮಳ್ಳಿ!
ಸುಂದರ ಶಿಲ್ಪವೊ–ನಿರ್ಜೀವ ಜಲ್ಪ!
–ಒಂದೇ ಮಾತಂದೇನು: ಬಂಗಾರವೊ
ಆಕೆ–ನಿಂತರೆ ತೆಂಗಿನ ತೇರಂದವೊ!

ಅಂಕಣ ಚಪ್ಪರ ಸೀರೆಯ ನೆರಿನೆರಿ
ಉರಿಯುವ ಕಣ್ಣು, ಕೈಮೊಗದಾರತಿ
ಫಕ್ಕನೆ ಕಂಡರೆ ಖಿನ್ನಗೆ ಬಿನ್ನಗೆ
ನೋಡುತ್ತ ನಿಂತರೆ....ಕ....ಣ್ಣೀ....ಗೆ....:
'ತಾವರೆ ಕೆರೆಯಾಚೆ ತಾವರೆ ಕೆರೆಯಂತೆ
ಕೆರೆಯಾಚೆ ಕಾನು ಕಾನಾಚೆ ಬೆಟ್ಟಂತೆ
ಬೆಟ್ಟದ ಮುಡಿಯಾಗೆ ಹಾಲ್‌ಗಲ್ಲ ಗುಡಿಯಂತೆ....'
ಆ–ಯಕ್ಷಲೋಕದ ಕಥೆಗೆ ಕಾಲ್ ಮೂಡಿದಂತೆ
ಕಾಣುವ ಕಣ್ಣೀ ಬೆಪ್ಪಾದವೊ
ಆಕೆ–ಕುಂತರೆ ಮಲ್ಲಿಗೆ ಚಪ್ಪರವೊ!

ಹರೆಯದ ಕುಣಿತಕೆ ಚೆಲುವಿನ ಮಣಿತ
ಚೆಲುವಿನ ಮಣಿತಕೆ ಕನಸಿನ ತಣಿತ
ಬ್ಯಾರಲ್ಲ, ಇದು ಒಲವಿನ ಭಾವ–ಗಣಿತ!

ಆಕೆ–ನಡೆದರೆ ಮಿಂಚಿನ ದಿಬ್ಬಣವೊ
ಆಹ–ನಿಂತರೆ ತೆಂಗಿನ ತೇರಂದವೊ
ಹೀಂಗೆ–ಕುಂತರೆ ಮಲ್ಲಿಗೆ ಚಪ್ಪರವೊ!

---

## ೧೪. ಪುರುಷಬಲಿ

ಬಲಿಚಕ್ರವರ್ತಿ–ಮಾನವಶಕ್ತಿಯುದ್ಭುತದ
ಪ್ರತಿಮೂರ್ತಿ! ನೋಂತ ನೋಂಪಿಯೊಳುಳಿದುದಿನ್ನೊಂದೆ
ಯಾಗ; ಸ್ಥಿರ ತಾನೆ ದೇವೇಂದ್ರ ಮುಗಿಸಿದಂದೆ
ದಾನಶೂರನನಿವನ ಒಡನೆ ಬೇಡಿದ ಕುಬ್ಜ
ಪಡೆದ ಮೂರಡಿಯು ನೆಲದೊಂದು ಹುಲುಬೇಡಿಕೆಯ
ಮುಗಿಲುದ್ದ ಬೆಳೆದಳೆದ ಕುಬ್ಜ ಭೂವ್ಯೋಮಗಳ
ಸಾಲದಿರೆ ಬಲಿಯು ಪಾತಾಳಕಿಳಿಸಿದನಿಂತೆ
ಪ್ರಕೃತಿ ಪುರುಷನನಿಳಿಸಿ ಒಲಿದು ಕಾದಿಹುದಂತೆ!

ಹರೆಯವೇ ಹಾಗೆ! ಜಗ ಕಾಲಡಿಯಲಿಹ ಚೆಂಡು!
ಪ್ರಾಯಮತ್ತತೆಯಿಂದ ಕೊಡುಗೈಯ್ಯ ಧೀರನೊಲು
ಕಣ್ಣುರಿದು ಕಿಡಿಯಾಗಿ ಸಿಡಿದ ನಿನ್ನನು ಕುರಿತು
ನಾನೆಂದೆ: 'ಕೊಳ್ ಒಲವ!' ಆಯ್ತು ದರ್ಪದ ಗಂಡು
ಆದಿಪ್ರಕೃತಿಯು ಒಲವಿನಡಿಯಡಿಯಹುಡಿ!–ನೀನದಿಂತು
ಕಾಯುತಿಹೆ ಎನ್ನಿರವ ಹತ್ತಂಗುಲವ ಮೀರಿನಿಂತು!

---

## ೧೫. ದೀಪಾವಳಿ

ತಾರುಣ್ಯ ತಂದ ಸಾಹಸಸಹಸ್ರವಿದೆ
ಮಾನವ್ಯಹೃದಯದೊಳು ಹೊಳೆದ ದೀಪವಿದೆ
ಈ ದ್ವೇಷವೈರಕಶ್ಮಲದ ಕೆಸರಿನಲು
ಮೂಡಿರುವ ಸತ್ಯಪ್ರೇಮವಿದೆ ಎಂದೆನಲು,
ಬೆಳಕು ಮೆಲಮೆಲನೆ ಕತ್ತಲೊಳು ನಶಿಸುತಿರೆ
ಕರಗಿದೀ ಬೆಳಕೆ ಚಿಕ್ಕೆಯಾಯ್ತೆನುವಂತೆ
ನೀಲ ಬಾನಿನಲಿ ಲಕ್ಷನಕ್ಷತ್ರಗಳು
ಕಾವಳವ ನಗಿಸಿ ಮಿರಮಿರನೆ ಮಿನುಗಿರಲು
ಅಲ್ಲಿ ಅದೋ ಬಾನಿನಲಿ ದೀಪಾವಳಿ

ನೆಲದ ಒಡಲಿನಿಂದೆಸೆದ ಕುಡಿಮಿಂಚೊ ಇದು
ಭೂಮಿತಾಯ ಮೆಯ್ ಹರ್ಷರೋಮಾಂಚನವೊ
ಗರಿಗೆದರಿ ಕಿಡಿಗಳೀ ಕದಿರನುರಿಸಿರಲು
ಯಾವ ಶಕ್ತಿಗೋ ಎತ್ತಿದಾರತಿಯೆನಲು
ಬಯಲ ತುಂಬಿರುವ ಬಿದಿರು ಇವೆ ಕದಿರಾಗಿ
ಮಿಂಚುಹುಳು ಕೋಟಿ ಮೆಳೆಮೆಳೆಯನಾವರಿಸಿ
ಕ್ಷಣಕೊಮ್ಮೆಯೊಮ್ಮೆ–ಯಾವ ಸಂಕೇತದಲೊ–
ಒಂದಾಗಿ ಮಿಂಚಿ ಸಾಲುದೀಪವನಿಡಲು
ಇಲ್ಲಿ ಇದೊ ಬಯಲಿನಲಿ ದೀಪಾವಳಿ

ಕರಗಿ ಬರೆ ಬಾಳು ಜರೆಯೊಳಗೆ ನಡೆದಿರಲು
ಯೌವನವಿಲಾಸ ರಕ್ತ ಬಿಸಿಯೇರಿಸಲು
ಮೆಯ್‌ಸುಕ್ಕು ತೆರೆಗಳೊಂದೊಂದೆ ಸವಿನೆನಪ–
ನುಕ್ಕಿಸುತಲೆವೆಯ ಜುಂದಟ್ಟಿಸುವವೋಲು

ಹೊಳೆ ಪುಳಕಗೊಂಡು ಅಲೆಯಲೆಯು ಮೂಡಿರಲು
ಜೊಗಸೆಗೈ ಹಣತೆ ಅಲೆಯೊಳಗೆ ಜಾರಿರಲು
ದೀಪಸಾವಿರವು ತಾನಿರಲು ಮಿರ್ಮೊಡವು
ಸಾಲದೆಂಬವೊಲು ತನ್ನೊಳಗು ಬಿಂಬಿಸಿರೆ
ಅದೊ ಅಲ್ಲಿ ಹೊಳೆಯಲ್ಲಿ ದೀಪಾವಳಿ

ಮಾನವನ ಎದೆಯ ನರಕಾಸುರನ ವಧೆಯ
ಕೈಕೊಂಡು ಬಂದ ಬೆಳಕ ಹಿರಿ ಹಬ್ಬವಿದು
ಊರ ಸಾರಿತೇ ದೀಪಸೈನ್ಯಸಮೇತ
ದೀಪದೋಕುಳಿಯು ಊರ ನಗಿಸಿತೆ ಎನಲು
ತಲೆತಲೆಗೆ ಹಣತೆ ಎಲ್ಲಕೈಯಲು ಹಣತೆ
ಮನೆಮನೆಗೆ ದೀಪ ಬೀದಿಬೀದಿಗೆ ದೀಪ
ಗುಡಿಹೊರಗೆ ಜ್ಯೋತಿ ಗರ್ಭಗುಡಿಯಲಿ ಜ್ಯೋತಿ
ಎಲ್ಲೆಲ್ಲು ಬೆಳಕು ಹಬ್ಬವನೆ ಹಾಡಿರಲು
ಇದೊ ಇಲ್ಲಿ ಊರಿನಲಿ ದೀಪಾವಳಿ

ತೊರೆಯ ತೆರೆಯ ಕಾಲ್ಮೊಕೆಯ ತೊಡೆಯನೇರಿರುವ ಮನವನರಳಿಸುವ
ದೀಪ
ಚೆಲುವಿಯರ ಬೆರಳಿನುಂಗುರದ ಹರಳ ನೆರಳನಾಡಿಸುವ ಕನಸ ಕೆರಳಿಸುವ
ದೀಪ
ಹಾದಿಯುದ್ದ ಹೂ ಉದುರುತಿರೆ ಕಣ್ಣ ಮಿಟುಕಿಸುವ ನಗುವ ಇರುಳ
ನಾಚಿಸುವ ದೀಪ
ಗರ್ಭಗುಡಿಯ ಕುಡಿಯಿಂದ ಬಾನ್ಗೆ ಬೆರಳಿತ್ತು ದಿವವ ಸೂಚಿಸುವ ಪುಣ್ಯದೀಪ
ಈ ಎಲ್ಲ ಎಲ್ಲ ವರ್ಷಕೊಂದೆ ದಿನ–ಎಲ್ಲ ಇಂದುಮಾತ್ರ
ಓ ಚೆಲುವೆ ನಿನ್ನ ಸ್ನೇಹಸ್ಮರಣೆಯೋ, ಉರಿಸುತಿದೆ ನಿತ್ಯದೀಪ,
ದೀಪಮಯ ಹೃದಯಕೂಪ !

## ೧೬. ಬಾಯ್ದೆರೆಯೆ ಬ್ರಹ್ಮಾಂಡ!

"ಕಂಡ ತಂಡವ ಕೂಡಿ ಪುಂಡಾಟವಾಡಿಸಿ
ನಂದನಂದನನಡಗಿದ–ಕೇಳವ್ವ
ಕಣ್ಣುಮುಚ್ಚಲೆಯಾಡಿದ....

"ಮಾಗಾಯಿಮಾಟದ ಕುಂಭಕ್ಕೆ ಕೈಯ್ಯಿಕ್ಕೆ
ಸೂರೆಯಾಯಿತು ಹಾಲು ನೆಲಕುಕ್ಕಿತು
ಹೂವನೆತ್ತರ ಹೀರಿದ–ತನಿಜೇನ
ನಾಲಗೆಗಿಟ್ಟು ತೂರಿದ....

"ಮುರಲೀನಾದವ ಕೇಳಿ ಕೊರಳು ಕಳಚಿದ ಗೋವು
ಹಾಲು ಸುರಿದಿತು ಕರುವಿಗೆರಡು ಕಿವಿಯನೆತ್ತಿ
ನಂದನಂದನನೋಡಿದ–ಕೇಳವ್ವ
ಕಣ್ಣುಮುಚ್ಚಲೆಯಾಡಿದ....

"ಪೋರರನಡಗಿಸಿ ಬಳಿಗೆ ಸಾರಿದನವ್ವ
ಹವಳಕೆ ಹೊಂಗೊಳಲಿಟ್ಟು ನುಡಿಸಿದ ಮತ್ತೆ
ಸೀರೆಯಂಚನು ಕಾಡಿದ–ಅಯ್ಯಯ್ಯೊ
ಮುತ್ತ ಕಂಚುಕ ಬೇಡಿದ....

"ಮೀಸಲು ಹೆಣ್ಣು ನೀ ಚಿಣ್ಣ ಕಾಡಿಸದಿರೊ
ಯಾರಾಟಕಾರೆಂದು ಮತ್ತೆ ಹೇಳಿದೆನವ್ವ :
ಹಣ್ಣೆನುತ್ಸವ ಬಳ್ಳಿಗೆ–ತಮ್ಮಯ್ಯ
ಹೆಣ್ಣೆನುತ್ಸವ ಗಂಡಗೆ....

"ಒಂದು ಎಳೆಯುವುದಂತಿನ್ನೊಂದು ಗಾಲಿಯಂತೆ
ಉತ್ಸವ ಬೇರೊಬ್ಬನವಗೆಂದು ಕಣ್‌ಕುಣಿಸಿ
ಅರ್ಥವಾಗದುದೆಂದನೆ–ಅಮ್ಮಮ್ಮ
ಮೆಯ್‌ಗೆ ಪುಳಕವ ತಂದನೆ....

ಅರಗಿನೆದೆಯ ಬುದ್ಧಿ ಸೆರಗೀಲಿ ಜೈತಿಟ್ಟು
'ಪುಂಡಸಾಗು' ಎನೆ ಅಂದದ ದಂಡ ಕೂಡಿ
ನಂದನಂದನನಡಗಿದ–ಕೇಳವ್ವ
ಕಣ್ಣುಮುಚ್ಚಲೆಯಾಡಿದ...."

....ಇಂತೆನುವ ಪ್ರಜನುಗ್ಧೆಯಂತಾಯ್ತು ನನ್ನ ಪರಿ
–ಎಲೆ ಚಿನ್ನೆ, ನಿನ್ನ ನೆನಪಿನ ತಂಡ, ಕೃಷ್ಣನೊಲು
ಪುಂಡಮಂಡಲಿಗೂಡಿ ಕಾಡಿ ರಮಿಸುವುದೆನ್ನ—
ನಂದನಂದನನ ಸಂದರ್ಶನವ ಪಡೆದೆನೆನೆ
'ಮಣ್ಣು!' ಎನುವುದು ಬುದ್ಧಿ; ಎದೆ ಬೆದರಿ ನೋಡುವುದು:
ಅಲ್ಲಿ–ಮಣ್ಣಲ್ಲ, ಬಾಯ್ದೆರೆಯೆ ಬ್ರಹ್ಮಾಂಡ!

---

## ೧೭. ಸುದ್ದಿಯಿಳಿದೆರಗಿತ್ತು

ಮತ್ತೊಮ್ಮೆ ಮೊಲೆಗೆ ತುಟಿಯ ತಾಕಿಸುವ ಮುನ್ನ,
ತುಟಿಗಂಟಿದೊಂದು ಹಾಲಿನ ಹನಿಯು ನಾಲಗೆಗಿಳಿವ ಮುನ್ನ,
ಅಮ್ಮನ ಪದಕದಲಿ ಅಶ್ಚರ್ಯದುಬ್ಬುತದೀಪ ಹೊಳೆದು
ಕುಲುಕುಲುಕುಲು ನಗುವ ಮುನ್ನ,
ಸುತ್ತ ವಿಸ್ಮಯ ಕಂಡು ಉರಿಯೊಲರಳಿದ ಕಣ್ಣು
ಅರಿಮುಗಿದು, ಹೊಡಿಮರಳಿ, ಯಕ್ಷನಂದನಕೆ ಹೊರಳುವ ಮುನ್ನ,
ನಲ್‌ಬಿಸಿ ತೊಡೆಯ ತೊಟ್ಟಿಲಲಿ ಮಲಗಿರುವ
ಮಲ್ಲಿಗೆಮುಗುವಿನೆದೆಗೆ ನೇರ ಗುರಿಯಿಟ್ಟು
—ರಣಹದ್ದಿನಂತೆ—
ಸಾವಿನ ಗುಮ್ಮಗುದ್ದೆರಗುವಂತೆ....,
ಸುದ್ದಿಯಿಳಿದೆರಗಿತ್ತು ಸಾವಿನ ಗುಮ್ಮ ಗುದ್ದಿನಂತೆ,
—ರಣಹದ್ದಿನಂತೆ....

ಹೊಗರೇರಿಸುವ ಸಾಲು ಹಗಲು,
ಸಂಜೆಯ ಜೇನ ಹೊನಲು ಹೊನಲು,
ದ್ರಾಕ್ಷಿರಾತ್ರಿಗಳ ಗೊಂಚಗೊಂಚಲು,
ನಾಳೆನಾಳೆಯೆಂದೆನುತ ಕಣ್ ಕುಟುಕಿ
ಸರಿದಿರಲು ಬೆರಳು ತೋರಿ,
ಒಕ್ಕರಿಸಿತೊಂದು ದುರ್ದಿನದ ಹಾಳುಬೆಳಗು
—ಆ ಹಾಳು ಬೆಳಗಿನಂದು,
ಸುದ್ದಿಯಿಳಿದೆರಗಿತ್ತು ಸಾವಿನ ಗುಮ್ಮಗುದ್ದಿನಂತೆ,
—ರಣಹದ್ದಿನಂತೆ....

[ನೆರೆ ತುಂಬಿ ಬರುವಾಗ ತೇಲುವ ಟೊಂಗೆ ಟೊಂಗೆ
ಅಲ್ಲಲ್ಲೆ ಹಾಂಗ್ಹಾಂಗೆ ಕೂಡತಾವೆ
ಮತ್ತೊಂದು ಚಣದಾಗೆ ಸುಳಿಸಿಕ್ಕು ಬ್ಯಾರಾಗಿ
ಎಲ್ಲೆಲ್ಲೊ ಹ್ಯಾಂಗ್ಹ್ಯಾಂಗೊ ಓಡತಾವೆ....]
ಎಲ್ಲಿಯೆಲ್ಲಿಯೋ, ಹೇಗೆಹೇಗೆಯೋ ಕೂಡಿವೆರಡು ಜೀವ
ಎಲ್ಲಿ–ಇಲ್ಲಿಯೇ, ಹೇಗೆ–ಹೀಗೆಯೇ ಒಡೆದಿವೆನ್ನುವಂಥ,
ಸುದ್ದಿಯಿಳಿದೆರಗಿತ್ತು ಸಾವಿನ ಗುಮ್ಮಗುದ್ದಿನಂತೆ
—ರಣಹದ್ದಿನಂತೆ !

---

## ೧೮. ಇರುವಿಕೆ ಸ್ಥಿರಗೊಳದೆ?

ಇಟ್ಟಣಿಸಿಹ ಕಗ್ಗತ್ತಲಿ ಬಟ್ಟಂಬಯಲಂಯ್ಕೊ ಸುರಿಮಂಜು
ಚಿಂತೆಯ ಚಿತೆಯಗ್ನಿಯ ತಣ್ಣೇರಿಸಿ ಹೆಪ್ಪಿಳಿದಿಹ ಹೊಗೆ–ನಂಜು....
ಭಣಗುಟ್ಟುವ ಮಸಣದ ಚಿತೆ ಕಾಯುವ ಹೆಣವಾಗಿಹ ಓ ಕೂಸೆ
ಚರಮಶ್ಲೋಕವ ಹಾಡಲು ಸಂಜೀವಿನಿ ಒಲವೆಲ್ಲಿಹೆ ಮನವೆ?....
"ಉಕ್ಕುವುದೇನುಕ್ಕಲಿ ಸರಿ ಹಾಲ್ಗಡಲಲಿ ಹಾಲಾಹಲ ಅಮೃತದ ಸುಳಿವಿರದೆ–
ಚಿಂತನ ಮನಮಂಥನ ನಡೆದಿರುವಿಕೆ ಸ್ಥಿರಗೊಳದೆ?"

ಛಟ್ಛಟಛಟಗುಟ್ಟುತ ತೆರಪಿಲ್ಲದೆ ಬರಸಿಡಿಲೆರಗಿ ಸಹಸ್ರ
ಘೋರಿಸ್ನುತಲೊಂದೇ ಸಮ ಮಳೆಗಾಲದ ಕಾರ್ಧಾರೆ ಅಜಸ್ರ
ದಿನದಿನಗಳು ಸುರಿದೊಮ್ಮೆಗೆ ಸ್ಮೃತಿತಪ್ಪಿದವೊಲು–ಚೇತನಸ್ತಬ್ಧ
ನರಳಲು ಸಹ ಉಸಿರಿಲ್ಲದೆ ಮರವಟ್ಟಿದೆ ಮಲಗಿದೆ ನಿಶ್ಶಬ್ದ ....
"ಉಕ್ಕುವುದೇನುಕ್ಕಲಿ ಸರಿ ಹಾಲ್ಗಡಲಲಿ ಹಾಲಾಹಲ ಅಮೃತದ ಸುಳಿವಿರದೆ–
ಚಿಂತನ ಮನಮಂಥನ ನಡೆದಿರುವಿಕೆ ಸ್ಥಿರಗೊಳದೆ?"

ಪ್ರಳಯಾಗ್ನಿಯ ಕಿಡಿಯೋಡುತ ಸರಭರಭರ ವಿಶ್ವದ ಎಡೆ ಎಡೆಗು
ಗ್ರಹತಾರಾಭೂಸೂರ್ಯರ ಸಿಡಿಮದ್ದಿನ ಕುಡಿಕೆಯ ಕುಡಿಕುಡಿಗು
ಉರಿಯಿಕ್ಕಲು ಬ್ರಹ್ಮಾಂಡವೆ ಸಿಡಿದೊಡೆಯುತ ರುದ್ರಾರ್ಭಟ ನಡೆಸಿ
ಶೂನ್ಯದ ಕರಿಬಸಿರಲಿ ಕರಗಿತೆ ಸರ್ವವು ವಿಲಯದಿ ಲಯವಾಗಿ ....
"ಉಕ್ಕುವುದೇನುಕ್ಕಲಿ ಸರಿ ಹಾಲ್ಗಡಲಲಿ ಹಾಲಾಹಲ ಅಮೃತದ ಸುಳಿವಿರದೆ–
ಚಿಂತನ ಮನಮಂಥನ ನಡೆದಿರುವಿಕೆ ಸ್ಥಿರಗೊಳದೆ?"

ಬರಿ ಭ್ರಮೆಯಲಿ ಅಣುವೊಳಗಿನ ಕಣಕಣಗಳ ಪರಿಭ್ರಮಣವ ನಡೆಸಿ
ಚಿತ್‌ಸರಸತರಂಗವು ಮೆಯ್‌ದುಂಬಲಿ ಎಂದೊಂದೇ ಹಂಬಲಿಸಿ
ಬೇಗುತ್ತಿಹ ಕಗ್ಗಲ್ಲಿಗು ಕಡೆಯಾಯಿತೆ ಜಡದಲಿ ಜಡವಾಗಿ
ಶೂನ್ಯದಿ ಮನ ಲಯಗೊಂಡಿತೆ ವಿಶ್ವದ ನಿಯತಿಗೆ ಸಹ ಹೊರತಾಗಿ?....
"ಉಕ್ಕುವುದೇನುಕ್ಕಲಿ ಸರಿ ಹಾಲ್ಗಡಲಲಿ ಹಾಲಾಹಲ ಅಮೃತದ ಸುಳಿವಿರದೆ–
ಚಿಂತನ ಮನಮಂಥನ ನಡೆದಿರುವಿಕೆ ಸ್ಥಿರಗೊಳದೆ?"

---

## ೧೯. ಸದ್ದುಮಾಡದೆ ಮಲಗಿ

ಸದ್ದುಮಾಡದೆ ಮಲಗಿ ಮುದ್ದು ಕಂದಮ್ಮಗಳೆ
ನಿದ್ದೆಮಾಡಿರೆದೆಯ ತೊಟ್ಟಿಲೊಳು
ನಿದ್ದೆಮಾಡಿರೆದೆಯ ತೊಟ್ಟಿಲೊಳು ಕನಸಿನ
ಮುದ್ದುಮುಗುಳುಗಳೆ ಜೋ ಜೋ

ಕರುಳ ಕುಡಿಗಳೆ ನೀವು ಮರುಳರೊಲು ಓಡಿರಲು
ತೆರವಾಗಿ ಎದೆಯ ತೊಟ್ಟಿಲು
ತೆರವಾಗಿ ಎದೆಯ ತೊಟ್ಟಿಲು ತೂಗಿತ್ತು
ತೆರಳದಿರಿ ಮರಳಿ ಜೋ ಜೋ

ಸಣ್ಣ ಚಿಣ್ಣರೆ ನಿಮ್ಮ ಬಣ್ಣಬಣ್ಣದ ಉಡುಗೆ
ಮಣ್ಣಿಗಿಳಿದಯ್ಯೊ ಹಳಸೀತು
ಮಣ್ಣಿಗಿಳಿದಯ್ಯೊ ಹಳಸೀತು ಚಿತ್ತದ
ಕಣ್ಣುಗಳೆ ಮಲಗಿ ಜೋ ಜೋ

ಚಿನ್ನದ ಮುಗಿಲ ಕೂಡಿ ಚಿನ್ನಾಟವಾಡಲು
ಮುನ್ನುಗ್ಗಿ ರೆಕ್ಕೆ ಮುದುರೀತು
ಮುನ್ನುಗ್ಗಿ ರೆಕ್ಕೆ ಮುದುರೀತು ಮಕ್ಕಳೆ
ಇನ್ನಾದರು ಮಲಗಿ ಜೋ ಜೋ

ಇರುಳು ಕವಿದರು ಮುಗಿಲೊಳರಲುಗಳು ಮೂಡದಿವೆ
ಹರಳುಗನ್ನಡಿ ಮುಖದ ಚಂದ್ರಮ
ಹರಳುಗನ್ನಡಿ ಮುಖದ ಚಂದ್ರಮ ಬರಲಿಲ್ಲ
ನೆರಳು ಮುಚ್ಚಿತು ನೆಲವ ಜೋ ಜೋ

ಮುಗಿಲಿನೊಡನಾಟದಲಿ ಚಿಗಿಚಿಗಿದು ಕುಣಿದಾಡಿ
ಹಗಲುಗನಸಿನ ಬಯಲೊಳೋಡಾಡಿ
ಹಗಲುಗನಸಿನ ಬಯಲೊಳೋಡಾಡಿ ದಣಿದಿರುವ
ಬಗೆಯ ಹಸುಗೂಸುಗಳೆ ಜೋ ಜೋ

ತುಂಬುತೊಟ್ಟಿಲಿನಿಳಿದು ಹಂಬು ಹರಿಯೋಡದಿರಿ
ಅಂಬಾ ಎಂದೊರಲಿ ದಣಿದೇನು
ಅಂಬಾ ಎಂದೊರಲಿ ದಣಿದೇನು ಮಕ್ಕಳೆ
ರಂಬಿಸುವೆ ಮಲಗಿ ಜೋ ಜೋ

ಕುಣಿದು ನಲಿದರೆ ನೀವು ಕುಣಿಯುವುದು ನಲವೊಲವು
ದಣಿದು ನಲುಗಿದರೆನ್ನ ಗತಿಯೇನು
ದಣಿದು ನಲುಗಿದರೆನ್ನ ಗತಿಯೇನು ನೆಲದಡಿಯ
ಕುಣಿಪಾಲು ಬೇಡ ಜೋ ಜೋ

ನಾಳೆ ಬರಲಿಹುದುಂಟು ಬೆಳಕು ಹರಿಯಲಿಕುಂಟು
ಕೋಳಿ ಹೂ ಕೆರೆಯೊಳರಳ್ಯಾವು
ಕೋಳಿ ಹೂ ಕೆರೆಯೊಳರಳ್ಯಾವು ದಳದಳ
ಬೆಳಗಾಗುವನಕ ಜೋ ಜೋ

ರಂಜಬಟ್ಟಲು ಹೂವಿನಂಜಿನಡುಗುವ ನಕಳೆ
ಮುಂಜಿನಲಿ ಕಂಡರಿಸಿ ತಂದಂತೆ
ಮುಂಜಿನಲಿ ಕಂಡರಿಸಿ ತಂದಂತೆ ಅರಳ್ಯಾವು
ಮುಂಜಾವು ಬರಲಿ ಜೋ ಜೋ

ಮಲ್ಲಿಗೆ ಹಂದರನಡಿಯ ಕಲ್ಲು ಹೂ ಮುಡಿದಾವು
ಚೆಲ್ಲಾಡುವ ತುಂಬೆ ಹೂ ತುಂಬಿ
ಚೆಲ್ಲಾಡುವ ತುಂಬೆ ಹೂ ತುಂಬಿ ತೂಗ್ಯಾವು
ಅಲ್ಲಿಯವರೆಗೆ ಜೋ ಜೋ

ಮರುಗದ ಮಡಿಯೆಡೆಗೆ ಅರಳಿ ಸೇವಂತಿಗೆ
ನರುಗಂಪು ಹೊಸತು ಹರಡೀತು
ನರುಗಂಪು ಹೊಸತು ಹರಡೀತು ಎಡೆಯೆಡೆಗೆ
ಮರಿಗೂಸುಗಳೆ ಮಲಗಿ ಜೋ ಜೋ

ಬೇಲಿಯುದ್ದ ನಿಂತ ಸಾಲು ಚಳಿದಾಸ್ಯಾಳ
ನೇಲ್ಯಾವು ಚೆಂದೋರಣಗಟ್ಟಿ
ನೇಲ್ಯಾವು ಚೆಂದೋರಣಗಟ್ಟಿ ಜಾಜಿಗಳು
ಮಲರಿ ಮಘಮಘಿಸ್ಯಾವು ಜೋ ಜೋ

ಸುರಿಯುವ ರಂಜಬೊ ಅರೆಬಿರಿದ ಮುತ್ತುಗವೊ
ಕರವೀರ ಶಂಖಪುಷ್ಪವೊ
ಕರವೀರ ಶಂಖಪುಷ್ಪವೊ ಪುನ್ನಾಗವೊ
ಆರಿಸುವಿರೆಲ್ಲ ಜೋ ಜೋ

ನಾಗಸಂಪಿಗೆ ಹೂವು ತೂಗಾಡಿ ತೊಂಗಲಲಿ
ಮೊಗವರಳಿ ಹನಿಯ ಮಿನುಗಿಸಿ
ಮೊಗವರಳಿ ಹನಿಯ ಮಿನುಗಿಸಿ ಕರೆದಾವು
ಬುಗುರಿಗೂಸುಗಳೆ ಜೋ ಜೋ

ಬೀದಿಯ ಬದಿಬದಿಗೆ ಚದುರಂಗವುದುರ್ಯಾವು
ಹಾದಿ ಮರದಮೇಲಿನ್ಹೆಜ್ಜೇನು
ಹಾದಿ ಮರದಮೇಲಿನ್ಹೆಜ್ಜೇನು ಭಾರದಿ
ಉದುರಿ ತೊಟಗುಟ್ಯಾವು ಜೋ ಜೋ

ಕಣಿಗಲ ಮರನಡಿ ಹೆಣೆದ ಹೂವಿನ ಮಾಲೆ
ಅಣಿಯಾಗಿ ಮದುವೆ ನಡೆದಾವು
ಅಣಿಯಾಗಿ ಮದುವೆ ನಡೆದಾವು ಮಾಣಿಕದ
ರಾಣಿಯರೆ ಮಲಗಿ ಜೋ ಜೋ

ಮಂದಾರ ಹೊನ್ನಿನ ಅಂದದ ಬಟ್ಟಲಲಿ
ತಂದಾವು ಮಂಗಳಾಕ್ಷತೆಯ
ತಂದಾವು ಮಂಗಳಾಕ್ಷತೆಯ ತಳಿದಾವು
ಮುಂದಲೆಯ ಮೇಲೆ ಜೋ ಜೋ

ಗಿಡಮರ ಚಿಗುರಿನ ತೊಡುಗೆಯ ಮೈಯ್ಗಿಟ್ಟು
ಹೆಡೆಯಾಡಿ ಹೂಗೊಂಚಗೊಂಚಲಲಿ
ಹೆಡೆಯಾಡಿ ಹೂಗೊಂಚಗೊಂಚಲಲಿ ತೂಗ್ಯಾವು
ಆಡಬರುವುವು ಹಕ್ಕಿ ಜೋ ಜೋ

ಬೆಳಗ ಜೇನಿನ ಹೊನಲು ತುಳುಕುಳುಕಿ ಹರಿದೀತು
ಇಳೆಯೆಲ್ಲ ಕುಲುಕುಲು ಅರಳೀತು
ಇಳೆಯೆಲ್ಲ ಕುಲುಕುಲು ಅರಳೀತು ನಂದನವ
ಇಳಿದೀತು ಕೆಳಗೆ ಜೋ ಜೋ

ನೊರೆಮುಗಿಲ ಚೆಲುವಿಯರನರೆಬಳಸಿ ಬಳಬಳಸಿ
ಗರಗುಟ್ಟೆ ಹಕ್ಕಿ ತಿರುಗ್ಯಾವು
ಗರಗುಟ್ಟೆ ಹಕ್ಕಿ ತಿರುಗ್ಯಾವು ಒಲವಿನ
ಸರಸಕೇಳಿಯ ನಡೆಸಿ ಜೋ ಜೋ

ತಾರಿದ ಮೆಯ್ಮೊಗವರಳ್ಯಾವು ನಾಳೆಗೆ
ತೌರು ಜೀವಕೆ ನಿದ್ದೆ ಮಲಗಿರಿ
ತೌರು ಜೀವಕೆ ನಿದ್ದೆ ಮಲಗಿರಿ ಮನುವನದ
ಪಾರಿಜಾತಗಳೆ ಜೋ ಜೋ........

---

# ೨೦. ಹೆಬ್ಬಾಗಿಲ ಮುಚ್ಚು

ಬಳಿ ಸುಳಿಯುವ ಹೊಳೆದೋಡುವ ಭಾವನೆಗಳ ಮೆರವಣಿಗೆಯ ಸಾಲು
ಒಳಬರಲೆಂದೊಸಗೆಯ ಹಿಡಿದಿಲ್ಲಿಯೆ, ಹೆದ್ದಾರಿಯ ಕೆಳಮೇಲು
ಕಾತರದಿಂದಾತುರದಿಂ ಕಳಕಳಿಯುಲಿ ನೋಡುವ ತೊಯ್ದಿದೆಯೆ,
ತಳಮಳಿಸುವೆ ನಂಟರು ಇವರೊಳಬಾರರು ಎಂಬುದನರಿಯದೆಯೆ !

ಒಡಲೆಡೆಯೆಡೆ ಗಿಡಿದೊಡೆದಿರೆ ಜೊಂಡೋಲೆಯ ಹೋಲುವ ನಾಡಿನುವೆ,
    ಹರಹರಳಿಗೆ ಹವಳವ ತಾಗಿಸುವರಗಿಣಿಯೆಲ್ಲಿ?

ಮೆಲುಸೋಂಕಿಗೆ ಮೆಯ್ ಕಂಪಿಸಿ ರಸವುಗುವ ರಸಾಲದ ತನಿವಣ್ಣೆ,
    ರಸಕಾತರರರಸನೆಯ ರತಿರಸಿಕಳು ಬಹಳೆಲ್ಲಿ?

ಜೇನ್ದುಂಬಿದ ಮೆಯ್ಗಣ್ಗಳು ಜೇಂಜಿನುಗುವ ಜೋಲಾಡುವ ಜೇನೆ,
    ಝೇಂಗುಟ್ಟುತ ಜುಮ್ಮನೆ ಮೇಲ್ಮುತ್ತುವ ಅಳಿಯೆಲ್ಲಿ?

ಉಗುಮೊತ್ತಲು ನೀರಿನ ಸೆಲೆ ಚಿಳ್ಳನೆ ಮೇಲ್ ಚಿಮ್ಮುವ ಸಿರಿಸೆಲವೆ,
    ಸಾಲುಳಲಿಹ ನೇಗಿಲು ಕಾಳ್ಬೀರುವ ಕೈಯೆಲ್ಲಿ?

ಮಿಕ್ಕಕ್ಕರೆ ಸಕ್ಕರೆ ಜೇನ್ ಘನಗಟ್ಟಿಹ ಮಧುಪರ್ಕದ ಕೊಡವೆ,
    ಷೋಡಶ ಉಪಚಾರವ ಕೊಳ್ಳುವ ಅತಿಥಿಗಳೆಲ್ಲಿ?

ಸೆರಗಟ್ಟಿದ ಸಂತೆಯ ನಡುಬೀದಿಯುರೊಂದರವಟ್ಟಿಗೆಯುಟ್ಟು
ಬರಹೋಗುವರೆಲ್ಲರಿಗೂ ಬಾ ಬಾ ಎಂದಾಹ್ವಾನವ ಕೊಟ್ಟು
ನೆತ್ತರು ಬಸಿವೆದೆಯೇ, ಮೊರೆ ವ್ಯರ್ಥವು ಅರ್ಥಯಿಸದು ಎಲೆ ಹುಚ್ಚು,
ಕೇಳಿಸದೇ ಸಿಡಿಮದ್ದಿನ ಉರಿಗದ್ದಲ?—ಹೆಬ್ಬಾಗಿಲ ಮುಚ್ಚು !

## ೨೧. ಮೂರನೆಯ ಮುತ್ತು

ಬೈತಲೆಯ ರಜತರೇಖೆಯು ಹಣೆಯನರೆವೆರೆಯ
ಕೂಡುವೆಡೆ ತಾರೆಯೊಲು ಮೊದಲ ಮುತ್ತು
ಮುಂದಲೆಯ ಬಟ್ಟಾಗಿ ತೂಗಾಡಿತು

ತುಟಿಯ ಮೃದುರಾಗಸಹಸ್ಪಂದಿಯಹ ಕೆನ್ನೆಗಳ
ಚೆಲುವ ಸುಳಿಯಾಳವಳೆಯುವೆನೆಂದುದೊಂದು
ಮುಗ್ಧಾಶ್ರುಮುಕ್ತಕವನೊಡಗೂಡಿತು

ಮೂರನೆಯ ಮುತ್ತು — ಓ ಚೆಲುವೆ, ನಿನ್ನಯ ತುಟಿಯ
ಹಂಬಲಿಸಿ, ಹವಳಚಿಪ್ಪೊಡೆಯದೆಯೆ ಉರಿಯಾಗಿ
ನನ್ನ ತುಟಿಯನೆ ಸುಟ್ಟು–
ನಿಟ್ಟುಸಿರ ಹೊಗೆಯಾಗಿ ನೇಲಾಡಿತು !

## ೨೨. ಎಂದಾದರೊಂದಿರುಳು

ಎಂದಾದರೊಂದಿರುಳು
ಬಾನಿನೆದೆ ಕರಗಿ ಹರಿದ ಹಾಲ ನೆಲ ಕುಡಿದು ಅರಳುತಿರಲು
ಕಲ್ಲುಕಲ್ಲಿಗೂ ಕಥೆಯ ಹೇಳಿ ಹೊಳೆ ಸರಿದು ಹೊರಳುತಿರಲು
ಮಣ್ಣು ಮುದವಳಿದು ಹಗುರ ಹೂವಾಗಿ ಕಂಪ ಸಲಿಸುತಿರಲು
ಮಡಿಲ ತುಂಬಿರುವ ಬೆಳಕ ಬೆಡಗಿನಲಿ ನೋಡವಲೆಯುತಿರಲು
ಎದೆಯ ಗೂಡಿನಲಿ ಗೂಕಿ ಗುಟುರಿಡುವ ಮಮತೆಯುಂಡ ಜೋಡಿ
ಪಾರಿವಾಳಗಳನೆಳೆದು ತೆಗೆದು ಮುಂಗೈಯೊಳಿಟ್ಟು ನೋಡಿ
ನನ್ನ ಪಾಡೆ ಜಗದೊಂದು ಹಾಡು ಎಂದರಿತು ಭಾಗಿಯಾಗಿ
ರಾಗವುಳಿದ ಈ ತ್ಯಾಗಯೋಗ ಆನಂದಭೋಗವಾಗಿ
ಹಾಡುವೆನು ನಮ್ಮ ಪ್ರೇಮಪಥ ಭಾವಗತಿಯ
ಪ್ರಣಯವ್ಯಥೆ ಕಳೆದ ರಸಜೀವ ಪುಣ್ಯಕಥೆಯ!

ಎಂದಾದರೊಂದಿರುಳು
ತಿಂಗಳಿಳಿದು ಕಿಟಕಿಯಲಿ ತನ್ನ ತಿಳಿ ಸೆರಗ ತೇಲಿಸಿರಲು
ನನ್ನ ಹಾಡ ಹೊತ್ತಿಗೆಯ ಹಿಡಿದು ನೀನಂದು ಓದುತಿರಲು
—ಹಗಲ ಬೆಳಕು ಮಸಮಸಳುತಿರಲು ತಾರೆಗಳು ಮೂಡುತಿಹವೆ?
ಈಗ ಛಾಯೆ ಮತ್ತೀಗ ಕ್ಷಣದೊಳಗೆ ಅಯ್ಯೋ ಎಂಥ ಮಾಯೆ—
ದಿನದ ಬದುಕಿನಲಿ ಹೊಂದಿದಂಥ ಮತ್ತೊಂದಕೆರಗುತಿರಲು
ನೆನಪಿನೆಣ್ಣೆಯಲಿ ರಾಗ ಹಚ್ಚಿರುವ ಹಣತೆಯುರಿಯುತಿರಲು
'ಒಲಿದ ಜೀವವೇ!'—ಎಂದು ಸುಯ್ಯುತಿರಲಳಲು ಮಡಿಲ ಕೂಸು
ಲಾಲಿಯೆನಲು ಲಾಲಿಸುವ ನಗುವ ಆ ಮಗುವ ನೋಡಿ ತಾಸು
ಮರೆತುಬಿಡು ನಮ್ಮ ಪ್ರೇಮಪಥ ಭಾವ ಗತಿಯ!
ಪ್ರಣಯವ್ಯಥೆ ಕಳೆದ ರಸಜೀವ ಪುಣ್ಯಕತೆಯ!

---

## ೨೩. ಮೊದಲ ಕೂಟ

ಕತ್ತಲಿರಲಿಲ್ಲೊ ಆಗ ಬೆಳಕು ಇರಲಿಲ್ಲೊ
ಮಣ್ಣು ಇರಲಿಲ್ಲೊ ಆಗ ಹಣ್ಣು ಇರಲಿಲ್ಲೊ
ಗಾಳಿ ಇರಲಿಲ್ಲೊ ಆಗ ಬೆಂಕಿ ಇರಲಿಲ್ಲೊ
ತ್ರಾಣ ಇರಲಿಲ್ಲೊ ಆಗ ಪ್ರಾಣ ಇರಲಿಲ್ಲೊ........

* * *

ಕಡಲಿನಾಚೆ ಕಡಲು ಕಡಲ ಸುತ್ತ ಕಡಲು
ಏಳು ಕಡಲೊಳಗೆ ಬಿರುಬೆಟ್ಟ
ಏಳು ಕಡಲೊಳಗೆ ಬಿರುಬೆಟ್ಟ ಸೃಷ್ಟಿಸಿ
ಮುಡಿಯಾಗೆ ಶಿವಕುಂತ ತಪಕಾಗಿ
ಮಡಚುಗಾಲು ಕೈಯ್ಯಿ ಮುಗಿದ ಬಾಯಿ ಕಣ್ಣು
ಶಿವಕುಂತನಣ್ಣ ತಪಕಾಗಿ........
ಮುಗಿದ ಕಣ್ಣಿನಾಗೆ ಮುಗಿದಿತ್ತೊ ಜಗವೆಲ್ಲ
ಮುಗಿವೆ ಕರಿದಾಗಿ ಕುಣಿದಿತ್ತೊ
ಕತ್ತಲ ಕುಣಿತಕೆ ಸದ್ದಿಲ್ಲ ಸುಳಿವಿಲ್ಲ
ಗದ್ದಲಿಲ್ಲದೆ ಕಡಲೆಲ್ಲ
ಗದ್ದಲಿಲ್ಲದೆ ಕಡಲೆಲ್ಲು ಉಕ್ಯಾವೊ
ಕತ್ತಲೆ ಬೆತ್ತಲೆ ಕುಣಿದಿತ್ತೊ
ಹೆಜ್ಜೆ ಕೇಳದ ಕುಣಿತ ಲಜ್ಜೆ ಕಾಣದ ಕುಣಿತ
ಕತ್ತಲೆ ಬೆತ್ತಲೆ ಕುಣಿದಿತ್ತೊ........

* * *

ತಪಕೆ ಕುಂತ ಶಿವ ಮೆಯ್ಯನಲುಗ್ಯಾನಣ್ಣ
ಕುಂತಂತೆ ಗೆಲುವಾಗಿ ಮುಗುಳು ನಕ್ಕನಣ್ಣ
ಮೊಗ್ಗಿನಂಥ ಕಣ್ಣು ಸಣ್ಣ ತೆರೆದನಣ್ಣ........

ಓಹೋ ಅಚ್ಚರಿ ಏನೆಂಥ ಅಚ್ಚರಿ
ರೊಯ್ಯಿಂದವು ಕಡಲು ಗುಯ್ಯಿಂದಿತು ಬೆಟ್ಟ........
ಓಹೋ ಅಚ್ಚರಿ ಏನೆಂಥ ಅಚ್ಚರಿ
ಉರಿಯುವ ಕಣ್ಣಿಂದ ಧುಮುಕಿದ ಬೆಳಕಿನರಾಯ
ಧುಮುಕಿದ ಬೆಳಕಿನರಾಯ ಕುಣಿದನೊ ಕಾಲೆತ್ತಿ........
ರಾಯ ಕುಣಿದನಣ್ಣ ಕಡಲು ಉಕ್ಯಾವಣ್ಣ
ಸಿಡಿಲು ಬಡಿದ್ಹಂಗಾಗಿ ಬೆಟ್ಟ ನಡುಗ್ಯಾವಣ್ಣ ........
ಶಿವ ಕಣ್ಣು ಮುಚ್ಯಾನೊ ನಿಟ್ಟುಸಿರು ಬಿಟ್ಟನೊ........
ಓಹೋ ಅಚ್ಚರಿ ಏನೆಂಥ ಅಚ್ಚರಿ
ಕತ್ತಲ ರಾಣಿಯ ತಾಕಿದ ಶಿವನುಸಿರು
ಎಲ್ಲೆಲ್ಲು ಹರಡಿತೊ ಹೆಪ್ಪಾಗಿ ನಿಂತಿತೊ........
–ಶಿವ ಕುಂತ ಬೆಟ್ಟಕೆ ನೂರೊಂದು ಬಾಯಿ
ಒಂದೊಂದು ಬಾಯಿಗೆ ನೂರೊಂದು ನುಡಿದನಿ–
ಹತ್ತಾರು ಸಾಸಿರ ದನಿ ಗುಡುಗಿಟ್ಟವೊ :
**‘ ದೇಶಾಯ ತಸ್ಮೈ ನಮೋನಮಃ ! ’**
ಓಹೋ ಅಚ್ಚರಿ ಏನೆಂಥ ಅಚ್ಚರಿ–
ಬೆಳಕಿನ ರಾಯನ ತಾಕಿದ ಶಿವನುಸಿರು
ಎಲ್ಲೆಲ್ಲು ಹರಡಿತೊ ಗರಗರ ಸುತ್ತಿತೊ........
ಹತ್ತಾರು ಸಾಸಿರ ದನಿ ಮೊಳಗಿಟ್ಟವೊ :
**‘ ಕಾಲಾಯ ತಸ್ಮೈ ನಮೋನಮಃ ! ’**

* * *

ರಾಯ ಕುಣಿದನಣ್ಣ ಕಡಲು ಉಕ್ಯಾವಣ್ಣ ....
ರಾಯ ಕುಣಿದ್ಹಂಗ್ಹಂಗೆ ಕತ್ತಲೆ ಸಾಚ್ಯಾಳೊ
ಕತ್ತಲೆ ಸಾಚ್ಯಾಳೊ ಕಣ್ಣು ನೆಲಕಾದವೊ
ಕಣ್ಣು ನೆಲಕಾದವೊ ಮೆಯ್ ಬಿಳಿಚಿ ಬೆವರ್‍ಯಾವೊ
ಮೆಯ್ ಬಿಳಿಚಿ ಬೆವರ್‍ಯಾವೊ ಕದಪು ಕೆಂಪಾದವೊ ...

ಧಿಮ್ಮಂತ ಕುಣಿದನೊ ಬೆಳಕಿನರಾಯ
ಕಣ್ಣ ಅರಳಿಸ್ಯಾಳೊ ಕತ್ತಲರಾಣಿ
ಧಿತ್ತಂತ ಕುಣಿದನೊ ಗುಡುಗಿನ ರಾಯ
ಸಣ್ಣ ತುಟಿ ತೆರೆದಳೊ ಬೆಡಗಿನ ರಾಣಿ
ಥೈಯ್ಯಂತ ಕುಣಿದನೊ ಉರಿಗಣ್ಣ ರಾಯ
ಮೆಯ್‌ಗೊಟ್ಟು ಮಣಿದಳೊ ಕರಿಗಣ್ಣ ರಾಣಿ
ಥಕ್ಕಂತ ಕುಣಿದನೊ ಕಾಯಕದ ರಾಯ
ಗಕ್ಕಂತ ಹಿಡಿದಳೊ ಮಾಯಕದ ರಾಣಿ....
ಧಿಮಧಿತ್ತ ಧಿಮಧಿತ್ತ ಥೈಥಕ್ಕ ಥೈಥಕ್ಕ
ಬೆಳಕು ಕತ್ತಲೆ ಕೂಡಿ ಕುಣಿದರೊ ತಾಳಕ್ಕೆ
ತಮತಮ್ಮ ಕೈಕಣ್ಣ ಹುಬ್ಬಿನ ಮ್ಯಾಳಕ್ಕೆ....

ನೋಡಿ ನೋಡಿ ಕುಣಿದರೊ ಕೂಡಿ ಕೂಡಿ ಕುಣಿದರೊ
ಒಟ್ಟಿಗೆ ಕುಣಿದರೊ ಒಂದಾಗಿ ಕುಣಿದರೊ
ಒಂದಾಗಿ ಕುಣಿದರೊ....ಕರಗ್ಯಾರೋ....

* * *

ಬಣ್ಣ ಮೂಡ್ಯಾವಣ್ಣ ಬಣ್ಣ ಹರಿದಾವಣ್ಣ
ಬಲ ಬಣ್ಣ ಜಲ ಬಣ್ಣ ಬೆಟ್ಟದ ಮೆಯ್ ಬಣ್ಣ
ಕುಣಿತಕೊಂದು ಬಣ್ಣ ಮಣಿತಕೊಂದು ಬಣ್ಣ
ಹಾಡಿಗೊಂದು ಬಣ್ಣ ಗಾಡಿಗೊಂದು ಬಣ್ಣ
ಬಣ್ಣ ಮೂಡ್ಯಾವಣ್ಣ ಬಣ್ಣ ಹರಿದಾವಣ್ಣ....

* * *

ಮುಗುಳುನಕ್ಕ ಶಿವ ತುಟಿಯನೊಡೆದ ಶಿವ:
'ಮೊದಲ ಕೂಟದ ರಾಜರಾಣಿಗೆ ಜಯವಿರಲಿ'
—ಬೆಳ್ಳಿಯ ಬೆಟ್ಟಕ್ಕೆ ನೂರೊಂದು ಬಾಯಿ—
ಒಂದೊಂದು ಬಾಯಿಯು ನೂರೊಂದು ನುಡಿದನಿ:
'ಮೊದಲ ಕೂಟದ ರಾಜರಾಣಿಗೆ ಜಯಜಯ'
ಮುಗುಳುನಕ್ಕ ಶಿವ ತುಟಿಯನೊಡೆದ ಶಿವ:

‘ ಮೊದಲ ಕೂಟಕೆ ಜಯ ಮುಂದಿನಾಟಕೆ ಜಯ ’
ಒಂದೊಂದು ಬಾಯಿಯ ನೂರೊಂದು ನುಡಿದನಿ :
‘ ಕೂಟಕೆ ಜಯಜಯ ಆಟಕೆ ಜಯಜಯ ’....

* * *

ಜಯದ ಕೂಟ ಮುಗಿದು ರಾಣಿಯ ಬಸಿರಿಂದ
ಅಮಲಿನ ಮರಿಗೂಸು ತಿಂಗಳು ಮೂಡ್ಯಾನು
ತಿಂಗಳು ಮೂಡ್ಯಾನು ತಾರಕ್ಕಿ ಮೂಡ್ಯಾವು
ಬಣ್ಣ ಬಣ್ಣದ ಗೂಡು ನೂರೆಂಟು ಮೂಡ್ಯಾವು....
ಅರೆದುಂಡು ತಿಂಗಳ, ಅಮಲಿನ ಮರಿಗೂಸ
ರಾಯ ಕೊಂಡೊಯ್ದನೊ ಶಿವನಿಗೆ ನೀಡ್ಯನೊ....
    ಅಂಗೈ ತಿಂಗಳ ಎತ್ತಿಕೊಂಡ ಶಿವ
    ಎತ್ತಿಕೊಂಡ ಶಿವ ಮುಡಿಗೆ ಸಿಕ್ಕಿಸಿಕೊಂಡ
    ಮುಡಿಗೆ ಸಿಕ್ಕಿಸಿಕೊಂಡ ಮುಗುಳು ನಕ್ಕ ಶಿವ
ರಾಯ ರಾಣಿ ಕೂಡಿ ಶಿವಪಾದಕೆರಗ್ಯಾರೊ....
    ಮುಗುಳುನಕ್ಕ ಶಿವ ತುಟಿಯನೊಡೆದ ಶಿವ :
    ‘ ಕೂಡಿ ಮೇಳಾದವರು ಆಗಲಿ ಬಾಳಿರಿನ್ನು
    ಕಾಳು ಹೋಳಾದಂತೆ ಹುಡುಕಿ ಸುತ್ತಿರಿನ್ನು ’....
ರಾಣಿ ಬಂದಳೊ ಶಿವನ ಪಾದಕೆ ನಮಿಸ್ಯಾಳೊ
ಬೆಟ್ಟ ಬಿರಿಯುವಂತೆ ಕಣ್ಣೀರ ಸುರಿಸ್ಯಾಳೊ
    ಮುಗುಳುನಕ್ಕ ಶಿವ ತುಟಿಯನೊಡೆದ ಶಿವ :
    ‘ ಮಡಿಲುದುಂಬುವೆನವ್ವ ಅಮಲಿನ ಮರಿಗೂಸ
    ಸವಿದು ರಂಬಿಸುತಿರಲಿ ತುಂಬಿ ನಂಬಿಸುತಿರಲಿ
    ತಾರಕ್ಕಿಗಳ ಬಳಗ ನೆನಹ ಹಂಬಿಸುತಿರಲಿ
    ಮೊದಲ ಕೂಟಕೆ ಜಯ ಮುಗಿಯದಾಟಕೆ ಜಯ ’....
ರಾಯ ಬಂದನೊ ಶಿವನ ಪಾದಕೆ ನಮಿಸ್ಯಾನೊ
ಸದ್ದಿಲ್ಲದೆ ನೀರ ನೆಲತನಕ ಹರಿಸ್ಯಾನೊ

ಮುಗುಳುನಕ್ಕ ಶಿವ ತುಟಿಯನೊಡೆದ ಶಿವ :
'ಬಣ್ಣ ಬಣ್ಣದ ಗೂಡು ಕಣ್ಣ ಹಬ್ಬವಾಗಿ
ಅಣ್ಣ ನಿನ್ನ ಸೆರಗ ಬಿಡದೆ ಸುತ್ತುತಲಿರಲಿ
ಮೊದಲ ಕೂಟಕೆ ಜಯ ಮುಗಿಯಪಾಟಕೆ ಜಯ '....

* * *

ಶಿವಶಾಪವೆರಗಿ ಆ ನಲ್ಲರು ಬ್ಯಾರಾದರೊ
ಮರುವುಟ್ಟು ಪಡೆದ್ಹಂಗೆ ನಡೆದದ್ದ ಮರೆತರೊ....
ಸಂಜೆ ಮುಂಜಾನೆಯ ಮಂಜು ಪಂಜರದಾಗೆ
ರಾಣಿ ನಿಂತಳಣ್ಣ ರಾಯಗೆ ಹಂಬಲಿಸಿ....
ಕಣ್ಣಿಗೆ ತೋರ್ರ್ಯಾಳು ಕೈಗೆ ಸಿಕ್ಕಳಂತ
ಕೋಪವುಕ್ಕಿದ ರಾಯ ತಂತಾನೆ ಉರಿದುರಿದು
ಗರಗರ ಸುತ್ಯಾನೊ ಹಸಿದ ನಾಯೀಹಂಗೆ
ಅತ್ತೊಮ್ಮೆ ಇತ್ತೊಮ್ಮೆ—ಮತ್ತೆಮತ್ತೆ ಸುತ್ಯಾನೊ....

* * *

ಬಣ್ಣ ಮೂಡ್ಯಾವಣ್ಣ ಬಣ್ಣ ಹರಿದಾವಣ್ಣ....
ಗೌರಿ ಬಂದಳು ಶಿವನ ತೊಡೆಯನೇರಿದಳು
ಗಂಗೆ ಬಂದಳು ಶಿವನ ಮುಡಿಯನೇರಿದಳು
ಬಸವ ಬಂದನು ಶಿವನ ಓಲೈಸಿ ನಿಂದನು....
ಬಣ್ಣ ಮೂಡ್ಯಾವಣ್ಣ ಬಣ್ಣ ಹರಿದಾವಣ್ಣ....
ಬಣ್ಣವನುಟ್ಟುಕೊಂಡು ಭೂಮಿ ಮೂಡ್ಯಾಳಣ್ಣ
ಬಣ್ಣವ ತೊಟ್ಟುಕೊಂಡು ಗಿಡಗಳಾಡ್ಯಾವಣ್ಣ
ಬಣ್ಣ ಬಣ್ಣ ಮೂಡಿ ಹಕ್ಕಿ ಹಾರಾಡ್ಯಾವೊ
ಬಣ್ಣ ಬಣ್ಣ ಕೂಡಿ ಜೀವ ತೂರಾಡ್ಯಾವೊ....
ಬಣ್ಣ ಮೂಡ್ಯಾವಣ್ಣ ಬಣ್ಣ ಹರಿದಾವಣ್ಣ....

* * *

ಯುಗಯುಗಗಳ ಸುಕ್ಕು ಜಗದ ಮೆಯ್ ತುಂಬಿದರು
ಹಗಲಿರುಳು ಜೇಟಕೆ ಸುತ್ತಿ ನವೆದವಣ್ಣ....

ಯುಗಯುಗಗಳ ಸುಕ್ಕು ಜಗದ ಮೆಯ್ ತುಂಬಿದರು
ಬಣ್ಣ ಮೂಡ್ಯಾವಣ್ಣ ಬಣ್ಣ ಹರಿದಾವಣ್ಣ....

* * *

ಹಗಲಿಗೆ ಶರಣೋ ಶರಣು ಇರುಳಿಗೆ ಶರಣೋ ಶರಣು
ಪುರುಷಗೆ ಶರಣೋ ಶರಣು ಪ್ರಕೃತಿಗೆ ಶರಣೋ ಶರಣು
ಕಾಲಗೆ ಶರಣೋ ಶರಣು, ಅಣ್ಣ–ದೇಶಕೆ ಶರಣೋ ಶರಣು....

ಹಗಲಿರುಳಿನ ಬರಿ ಬೇಟಕೆ ಶರಣು
ಪುರುಷ ಪ್ರಕೃತಿಗಳ ಆಟಕೆ ಶರಣು
ಕಾಲದೇಶಗಳ ಕೂಟಕೆ ಶರಣು
ಶಿವಚಿತ್ತದ ಸಿರಿಮಾಟಕೆ ಶರಣು
ನೂರೆಂಟು ಬಾರಿಗು ಶರಣು !

---

## ೨೪. ನಡೆದದ್ದು ಹರಿಯು ಕ್ರೀಡೆ

'ಹಗಲೋ ಶಿವನ ಬಗಲು
ಇರುಳೋ ಅವನ ಮರುಳು
ಹಗಲು ಬೇಸರು, ಇರುಳು ಆಸರು
ಸಂಜೆಯೊ ಬಂಜೆ–ರಮಿಸುವಳೆಂತು?'
ಎನುತಿರಲು ಮಂದಿ....
ಎದುರು ಹಾದಳೋ ಅವಳು ಪಾದರಿಯು ಕಳ್ಳಕಂಪಿನಂತೆ;
ಸಪ್ತರಾಗ ಮುಚ್ಚಿರುವ ಅಚ್ಚು ಹಾಲ್ಗಾಜು ಭರಣಿ ಮೆಯ್ಯಿ
ಗುಪ್ತವಾದರೂ ಸುಪ್ತವಲ್ಲ ಒಳಯೆದೆಯು ತಪ್ತವಾಗಿ;
ಹೊರಳುವ ಕಣ್ ಕ್ಷಣ–ಮತ್ತೊಡನೆಯೆ ನೆಲದಾಸರೆ ಪಡೆಯುವುದು
ಮುಂಜಾವದ ಮುಗುಳೆನೆ ತುಟಿ ನಡುಗಿರೆ ನಾಚಿಕೆ ಮಿಡಿಯುವುದು
ಬಂಜೆಗು ಭಾಗ್ಯವು ಬಂತು
ಎನುವಂತು,
ಬೆಂಕಿಯ ಹೂ ನಕ್ಷತ್ರವನೆರಚುತ ವ್ರೀಡಾಕ್ರೀಡೆಯ ಮನ್ಮಥಸತಿ ರತಿ
ವಿಹಾರ ಹೊರಟಳು ಸಂಜೆಯಲಿ!

* * *

ಗೊನೆಸಿಂಗಾರವ ಧರಿಸದ ಹಸಿರೆಳೆಯಡಕೆಯ ಸಸಿಯಂತೆ
ತುಂಬಿದ ಬರಿಗೊರಳಿರೆ ಒರುವಳೆ ನಿಂತವಳೇ ಸಿರಿವಂತೆ
ಅರೆದಿಂಗಳ ಮುಡಿದಿಹ ಕರಿಬೆಟ್ಟದ ಮುಡಿ ಮುತ್ತಿಡುವಂತೆ
ನೋಡುತಲಿರುವಳು ಕಲ್ಲಂತೆ....
ಒಮ್ಮೆಲೆ ಕಾಳ್ಗಿಚ್ಚಿನ ತೆರ ಪರಿಮಳ ಹಬ್ಬಲು ನಡುಗಿದಳೊ
ಹೂಗೊಂಚಲ ಮೆಯ್ ತಡವಿದಳೊ....
ಬೆಟ್ಟ ಕಣ್ಣು ತೆರೆಯಲೆಂದು,
ಭೀಮಬಾಹು ಮೂಡಲೆಂದು,

ತಿಂಗಳು ತುಟಿ ಕಾಡಲೆಂದು,
ಕಾಡಿನೊಳಗೆ ತಡಬಡಿಸಿದಳೊ....
ಬೆಂಕಿಯ ಹೂ ನಕ್ಷತ್ರವನೆರಚುತ ವ್ರೀಡಾಕ್ರೀಡೆಯ ಮನ್ಮಥಸತಿ ರತಿ
ವಿಹಾರ ಹೊರಟಳು ಸಂಜೆಯಲಿ!

* * *

'ಬೆಳಗಾಯಿತು ಸರಿ, ಬಾಳಿನ ತೆವರಿಗೆ ಜಾರಿತು ಕೀಲ್‌ಕಾಲು.
ಬೈಗಾಯಿತು ಸರಿ, ಜೆವರಿನ ವಾಸನೆ–ತೆರೆದಿತು ಬಾಯ್ ನಿಶೆಗೆ'
—ಬೇಸರ ಚಡಪಡಿಸುವ ಮೇಣ್ ಬೀದಿಯಲೋಡುವ ಈ ಗಂಡು
ತೆಕ್ಕನೇನೊ ಸರಿದು
ನಿಂತನೋ ಕಣ್ಣನರೆದು....
ಹೃದಯ ತೆರದಿರಲು,
ಮೆಯ್ಯ ಅರಗಿರಲು,
ಕೈಸಮೆದ ಕೂದಲಿರಲು....
ಬೆಂಕಿಯ ಹೂ ನಕ್ಷತ್ರವನೆರಚುತ ವ್ರೀಡಾಕ್ರೀಡೆಯ ಮನ್ಮಥಸತಿ ರತಿ
ವಿಹಾರ ಹೊರಟಳು ಸಂಜೆಯಲಿ!

* * *

ಬೆಂಕಿಯ ಹೂ ನಕ್ಷತ್ರವನೆರಚುತ ವ್ರೀಡಾಕ್ರೀಡೆಯ ಮನ್ಮಥಸತಿ ರತಿ
ವಿಹಾರ ಹೊರಟಳು ಸಂಜೆಯಲಿ!....

ನೆಲಸಮವೊ ಶಿಲ್ಪದುರ್ಗ,
ಆಯಿತೆಲ್ಲೆಲ್ಲು ರಾಜಮಾರ್ಗ,
ರಾತ್ರಿಯ ಮಾಯಾಸೌಧದ ಹಾದಿಯು
ಸಂಜೆಯು ನಾಚಿಕೆ–ಕಮಾನು ಬೀದಿಯ
ಕ್ರಮಿಸಿದರೋ ಮಂದಿ....

....ಅಲ್ಲಿ ನಗ್ನ ಜನ, ಮನ ನಗ್ನ, ನಗ್ನ ಬುದ್ಧಿ
ಭಗ್ನವಾಯ್ತೆ ಕೃತಿ?–ಇಲ್ಲ ಜೀವ ಮಗ್ನ !....
ಮಣ್ಣು ಇರಲಿಲ್ಲ ಅಲ್ಲಿ, ರಸವೆ ಸುರಿವ ಹಣ್ಣು....
ತ್ರಾಣವಿರಲಿಲ್ಲ ಅಲ್ಲಿ, ಇದ್ದದ್ದು ಉರಿವ ಪ್ರಾಣ....
ವ್ರೀಡೆ ಕಳಚಿತ್ತು ಅಲ್ಲಿ, ನಡೆದದ್ದು ಹರಿಯ ಕ್ರೀಡೆ....

---

# ಕೆಲವು ಪ್ರಾದೇಶಿಕ ಪದಗಳು

ಆರಿಲು : ನಕ್ಷತ್ರ
ಆಸರು : ಬಾಯಾರಿಕೆ
ಉಗುವ : ಉಕ್ಕುವ
(ಬಾನಿನ+ಉಗುವ)
ಕಂಡರಿಸು : ಕೆತ್ತಿ ನಿರ್ಮಿಸು, ಕೊರೆ
ಕಳ್ಳಿಹಾಲು : ಕಳ್ಳಿ ಗಿಡವನ್ನು ಗೀರಿ
ದರೆ ಬರುವ ಹಯನು
ಕೊರಡು : ಒಣಮರದ ತುಂಡು
ಕೋಳೆ : ಕುವಲಯ (ಸಂ.)
ಗೆಲುವಾಗಿ : ಹರ್ಷವಾಗಿ
ಚಳಿದಾಸ್ಯಾಳ : (ಚಳಿ = ಸೆಳೆ,
ಬೆತ್ತ) ಕೋಲುಕೋಲಾಗಿ ಬೆಳೆ
ಯುವ ಒಂದುಬಗೆಯ ದಾಸವಾಳ
ಚಿಗರಿ : ಜಿಂಕೆ
ಚುಂಗೆದ್ದ : (ಚುಂಗು+ಎದ್ದ)
ಕೂದಲು ನಿಮಿರಿರುವ
ಚಿಲ್ಲು : ಹುಡುಗು
ಜಂಪು : ಜೊಂಪು, ಅರೆನಿದ್ದೆ
ಜೊಂಪಲು : ಜೋಲುವ ಗೊಂಚಲು
ತನಿ : ತಂಪಾದದ್ದು
ತಳಿ : ಸಿಂಪಡಿಸು
ತಾರಕ್ಕಿ : ತಾರಿಕೆ, ನಕ್ಷತ್ರ
ತಾರಿದ : ಬಳಲಿ ಸೊರಗಿದ
ತೆರಪು : ಬಿಡುವು

ತೊಂಡಿಲು : ಹೆಂಗಸರು ಮುಡಿ
ಯುವ ಹೂವಿನ ಬಾಸಿಗ
ನಿಗುರು : ನಿಮಿರು, ಮೇಲೇಳು
ನಿರಿ (ನೀರಿ) : ಸೀರೆಯ ನಿರಿಗೆ
ನೇಲು : ಜೋಲು
ಪಕಳೆ : ಹೂವಿನ ಎಸಳು
ಬಗಲು : ಕೊಂಕುಳು
ಬಿನ್ನಗೆ : ಶೂನ್ಯವಾಗಿ
ಮಡಚುಗಾಲು : ಮಡಿಸಿದ ಕಾಲು
ಮರವಡು (ಮರವಾಗು) :
ನಿಶ್ಚೇಷ್ಟಿತವಾಗು
ಮುಂಪರು : ಮುಸುಕು
ಮ್ಯಾಳ : ಮೇಳ
ಮುಂದಲೆ ಬಟ್ಟು : ಬೈತಲೆಯಲ್ಲಿ
ಸಿಗಿಸಿ ಹಣೆಯಮೇಲೆ ಜೋಲಿ
ಸುವ ಪದಕದಂತಹ ಒಂದು
ಆಭರಣ
ಸಿಂಗಾರ : ಅಡಕೆಯ ಹೂವು
ಸೆಳೆಮಿಂಚು : (ಸೆಳೆ = ಬೆತ್ತ)
ಕೋಲುಮಿಂಚು
ಹಂಬು : ಬಳ್ಳಿ (ಹಂಬಿಸು=ಹಬ್ಬಿಸು)
ಹಾತೊರೆ : ಅವಸರಮಾಡು
ಹೆರೆ : ಹರೆ, ಟೊಂಗೆ.

# ತಿದ್ದುಪಡಿ

| ಪುಟ | ಸಾಲು | ತಪ್ಪು | ಸರಿ |
|---|---|---|---|
| ೭ | ೧೫ | ಹೂವದಳದಳ | ಹೂವ ದಳದಳ |
| ೯ | ೧ | ಹಸಿರುಮಣಿಯ | ಹಸಿರು ಮಣಿಯ |
| ೧೨ | ೧೪ | ಮಂಜಿನಪೊರೆ | ಮಂಜಿನ ಪೊರೆ |
| ೧೬ | ೧೧ | ಬಯಸಿದಕಡಲೊ | ಬಯಸಿದ ಕಡಲೊ |
| ೧೬ | ೧೨ | ಕಿವಿಕಿವುಡು | ಕಿವಿ ಕಿವುಡು |
| ೧೭ | ಶೀರ್ಷಿಕೆ | ನೆನವು | ನೆನಪು |
| ೧೭ | ೪ | ತುಸುಬಿಗಿ | ತುಸು ಬಿಗಿ |
| ೧೮ | ೩ | ಫುಳಕ | ಪುಲಕ |
| ೧೯ | ೧೪ | ಫುಳಕ | ಪುಳಕ |
| ೨೫ | ೧ | ಕ್ರೀಡೆಯಾಳು | ಕ್ರೀಡೆಯೊಳು |
| ೨೮ | ೧೧ | ಬಗೆ ತಡಕುತ | ಬಗೆ, ತಡಕುತ |
| ೩೧ | ೨ | ಬಗೆಯುದಂತೆಳೆ | ಬಗೆಯುದೆಂತೆಳೆ |
| ೩೩ | ೨೦ | ಅನುರಣಸಿದೆ | ಅನುರಣಿಸಿದೆ |
| ೩೪ | ೧೧ | ಗ್ರಹ ತಾರಾ | ಗ್ರಹತಾರಾ |
| ೩೮ | ೯ | ಅದೋ | ಅದೊ |
| ೩೯ | ೧೯ | ಇಂದುಮಾತ್ರ | ಇಂದು ಮಾತ್ರ |
| ೪೦ | ೬ | ಹೂವನೆತ್ತರ | ಹೂವ ನೆತ್ತರ |
| ೪೧ | ೬ | ಪುಂಡಸಾಗು | ಪುಂಡ ಸಾಗು |
| ೪೧ | ೧೩ | ನೋಡುವುದುಃ | ನೋಡುವುದು : |

